ಶ್ರೀರಸ್ತು.

ಶ್ರೀ ಕುಮಾರಾಯನಮಃ



# ಗೃಹವಾಸ್ತುದರ್ಪಣವು



ಶ್ರೀನಿವಾಸ ಪುರನಿವಾಸಿಗಳಾದ

ಬ್ರಂ॥ ಶ್ರೀ॥ ಲೋಕನಾಥ ಕವೀಶ್ವರರಿಂದ

ಬರೆಯಲ್ಪಟ್ಟ ಕನ್ನಡ ತಾತ್ಪರ್ಯದೊಡಗೂಡಿದೆ

ಇದು ಪಂಡಿತರಿಂದ ಪರಿಶೋಧಿಸಲ್ಪಟ್ಟು,

(ನಾಲ್ಕನೇ ಛಾಪಾ ೧೦೦೦ ಪ್ರತಿಗಳು)

ಇದರ ವಿಶಿಷ್ಟ ಹಕ್ಕನ್ನು ಹೊಂದಿರುವ

ವಾಜಪೇಯಂ, ಗೋವಿಂದಯ್ಯನವರ

ಸ್ವಕೀಯ

ಶ್ರೀ ವೆಂಕಟಾದ್ರಿ ಮುದ್ರಾಕ್ಷರ ಶಾಲೆಯೋಳ್ ಮುದ್ರಿಸಿ

ಪ್ರಕಟಿಸಲ್ಪಟ್ಟಿತು.

ಬೆಂಗಳೂರು ಸಿಟಿ.

1929.

ಕ್ರಯ ೦—೮—೦

# ಪ್ರಕಟನೆ.

---

## ಬಿಕರಿಗೆ ಸಿದ್ಧವಾಗಿರುವ ಪುಸ್ತಕಗಳು.

| | | | |
|---|---|---|---|
| ಹನುಮದ್ವಿಲಾಸ | ೦ | ೮ | ೦ |
| ಉದ್ಯಾಳೀಕನ ಹಾಡು | ೦ | ೪ | ೦ |
| ಶಶಿರೇಖಾಪರಿಣಯ | ೦ | ೬ | ೦ |
| ಗೀತಿಕಾತರಂಗಿಣಿ [ಬೀಗರ ಹಾಡು] | ೦ | ೬ | ೦ |
| ದ್ರೌಪತೀ ಸ್ವಯಂವರ | ೦ | ೫ | ೦ |
| ಕೃಷ್ಣ ಬೋಧಾಮೃತ | ೦ | ೧೨ | ೦ |
| ಸುಭದ್ರಾಪರಿಣಯ | ೦ | ೫ | ೦ |
| ಶೃಂಗಾರ ಶುಕಸಪ್ತತಿ | ೦ | ೧೨ | ೦ |
| ವೃಷಭೇಂದ್ರ ವಿಜಯ | ೨ | ೮ | ೦ |
| ಸುಧಾಮಚರಿತ್ರೆ | ೦ | ೫ | ೦ |
| ಯಕ್ಷಗಾನ ಹರಿಶ್ಚಂದ್ರನ ಕಥೆ | ೧ | ೦ | ೦ |
| ಚಂದ್ರಾವಳಿ ಕಥೆ | ೦ | ೪ | ೦ |
| ವಚನ ಭಾಗವತಕಥಾ ಸಂಗ್ರಹ | ೧ | ೦ | ೦ |
| ಮದನ ಮೋಹನರಾಜನ ಕಥೆ | ೧ | ೧೨ | ೦ |
| ಗಿರಿಜಾಕಲ್ಯಾಣ | ೦ | ೬ | ೦ |
| ಬೃಹತ್ಕಥಾಮಂಜರಿ | ೦ | ೧೨ | ೦ |
| ಮೂರುವರೆ ವಜ್ರದಕಥೆ | ೦ | ೩ | ೦ |
| ಮಣಿಮಂಜರಿ ಟೀಕು | ೧ | ೦ | ೦ |
| ವಾಯುಸ್ತುತಿ ಟೀಕು | ೦ | ೮ | ೦ |
| ಉದಯರಾಗ | ೦ | ೪ | ೦ |
| ರುಕ್ಮಾಂಗದ ಚರಿತ್ರೆ | ೦ | ೪ | ೦ |
| ಬಾಣಾಸುರನ ಕಥೆ | ೦ | ೫ | ೦ |
| ವೈದ್ಯಸಾರ ಸಂಗ್ರಹ | ೧ | ೦ | ೦ |

ವಾಜಪೇಯಂ ಗೋವಿಂದಯ್ಯ,

ಬುಕ್‌ಶೆಲರ್, ಮತ್ತು ಪ್ರಿಂಟರ್ಸ್.

ಚಿಕ್ಕಪೇಟೆ, ಬೆಂಗಳೂರು ಸಿಟಿ.

# ಗೃಹವಾಸ್ತು ವರ್ಣಣದ ವಿಷಯಸೂಚಿಕೆ.



ಗೃಹವಾಸ್ತು ದರ್ಪಣ ವಿಷಯಸೂಚಿಕಾ ಸಮಾಪ್ತಾ.

ಶ್ರೀರಸ್ತು

ಶ್ರೀ ಕುಮಾರಾಯ ನಮಃ.

# ಸನತ್ಕುಮಾರ ಗೃಹವಾಸ್ತು

## ದರ್ಪಣ ಪ್ರಾರಂಭ.



ನಮಸ್ತುಂಗೆ ಶಿರಶ್ಚುಂಬಿ ಚಂದ್ರಚಾಮರ ಚಾರವೆ ||
ತ್ರೈಲೋಕ್ಯ ನಗರಾರಂಭ ಮೂಲಸ್ತಂಭಾಯ ಶಂಭವೆ ||

ಶ್ಲೋ|| ಬ್ರಹ್ಮಾಶಕ್ರೋ ಯಮಶ್ಚೈವ ಭಾರ್ಗವಾಂಗಿರಸಾವ್ರಿಸಾ ಗೌತಮಶ್ಚೈವ ಗಾರ್ಗೇಯೋ ಮನುರ್ವ್ಯಾಸೋಭೃಗುಸ್ತಥಾ| ವಿಶ್ವಕರ್ಮಾದಯಶ್ಚೈವ ವಾಸ್ತುವಿದ್ಯಾ ವಿಶಾರದಾಃ | ಸರ್ವೇಷ್ವೇಕತ್ರ್ವಾ ಯಚ್ಛಾಸ್ತ್ರಂ ಸಾರಮುದ್ಧೃತ್ಯಯತ್ನತಃ | ಸನತ್ಕುಮಾರೋ ಮತಿಮಾನ್ ಸಮುದ್ಧೃತ್ಯ ಸ್ವಯಂಭುವೆ | ವಕ್ಷ್ಯತೆ ತತ್ಕೃತಂ ಶಾಸ್ತ್ರಂ ವಾಸ್ತುಶೋಭನಮುತ್ತಮಂ||

ಶ್ಲೋ || ಪ್ರಣಮ್ಯ ಲೋಕನಾಥೋಹಂ ವಾಙ್ಮತೀ ಪ್ರಾಣವಲ್ಲಭಂ || ಶ್ರೀವಾಜಪೇಯ ಕೃಷ್ಣಾರ್ಯ ಚೋದಿತಸ್ತು ಸ್ವಬುದ್ಧಿಯಾ | ಶ್ರೀಮತ್ಕುಮಾರಪ್ರಣೀತ್ಯ ಪೂರ್ವಂ ಸನತ್ಕುಮಾರಂಹೃದಯೇನಿಧಾಯ| ತತ್ಪ್ರೋಕ್ತವಾಸ್ತೋರ್ಗ್ರಹು ಬಾಲಬೋಧಿನೀಂ ಕರೋಮಿ ಕರ್ಣಾಟಗಿರಾಸುಟೀಕಾಂ ||

ಟೀ|| ಬ್ರಹ್ಮನು, ಇಂದ್ರ, ಯಮ. ಶುಕ್ರ, ಬೃಹಸ್ಪತಿ, ಗೌತಮ, ಗಾರ್ಗೇಯ, ಮನು, ವ್ಯಾಸ, ಭೃಗು, ವಿಶ್ವಕರ್ಮ, ಈ ಮೊದಲಾದವರು ಹೇಳಿದ ವಿಸ್ತಾರವಾದ ವಾಸ್ತು ಶಾಸ್ತ್ರದಲ್ಲಿ ಸಾರವಂ ತೆಗೆದು ಸಂಕ್ಷೇಪವಾಗಿ ಸನತ್ಕುಮಾರ ಮಹಾ ಯೋಗಿಯು ಹೇಳುತ್ತಾನೆ.

### ವಿಶ್ವಕರ್ಮನ ಚತುರ್ದಶ ನಾಮಗಳು ಮತ್ತು ಪೂಜೆ.

ಶ್ಲೋ || ವಿಶ್ವಕರ್ಮಾ ಪರಬ್ರಹ್ಮಾ ವಿಶ್ವಕರ್ಮ ಮುನೀಶ್ವರಃ | ವಿಶ್ವಕರ್ಮಾಚಪಸನ್ನೋ ವಿಶ್ವಕರ್ಮಾ ಮನುಸ್ತಿಪಃ | ವಿಶ್ವಕರ್ಮೈವ ಶಿಲ್ಪಾನಾಂವಿಶ್ವಜ್ಞೋವಿಶ್ವಕಾರಣಂ | ವಿಶ್ವಕರ್ಮಾ ತಥಾಚಾರ್ಯೋ ವಿಶ್ವಕರ್ಮಾಚದೇಶಿಕಃ ವಿಶ್ವಕರ್ಮಾ ರಥಾಕಾರೋ ವಿಶ್ವಕರ್ಮಾಚ ಪಂಡಿತಃ | ವಿಶ್ವಕರ್ಮಾ ಜಗನ್ಮಾತಾವಿಶ್ವಕರ್ಮಾಚ ಕಾಶ್ಯಪಃ | ವಿಶ್ವಕರ್ಮಾ ಸುರಜ್ಯೇಷ್ಠೋ ವಿಶ್ವಕರ್ಮಾ ಜಗ

ದ್ಧರಃ । ಎತದ್ವಿ ಸಪ್ತ ನಾಮಾನಿ ಯಃಪಠೇ ಚ್ಛಣಯಾ ತ್ಕ್ರಮಾತ್ ।
ವಿದ್ಯಾರಂಭೆ ವಿವಾಹೇಚ ಪ್ರಾರಂಭೆ ನಿರ್ಗಮೆ ತಥಾ । ಸಂಗ್ರಾಮೆ ಸರ್ವ
ಕಾರ್ಯೇಷು ವಿಘ್ನಸ್ತಸ್ಯ ನಜಾಯತೆ । ಪಂಚವಕ್ತ್ರಂ ಜಟಾಮುಕುಟಂ ಪಂ
ಚಾದಶವಿಲೋಚನಂ ಸದ್ಯೋಜಾತಾನನಂ ಶ್ವೇತಂ ವಾಸುದೇವಂತು ಕೃಷ್ಣ
ಕಂ ॥ ತತ್ಪುರುಷಂ ಪೀತವರ್ಣಂಚ ಈಶಾನಂ ಶ್ಯಾಮವರ್ಣಕಂ । ಅಘೋರಂ
ರಕ್ತವರ್ಣಂಚ ಶರೀರಂ ಹೇಮವರ್ಣಕಂ । ದಶಬಾಹುಂ ಮಹಾಕಾಯಂ
ಕರ್ಣಕುಂಡಲ ಶೋಭಿತಂ । ಪೀತಾಂಬರಂ ಪುಷ್ಪಮಾಲಾ ನಾಗೆಯಜ್ಞೋ
ಪವೀತಿನಂ । ರುದ್ರಾಕ್ಷಮಾಲಾಭರಣಂ ವ್ಯಾಘ್ರಚರ್ಮೋತ್ತರೀಯಕಂ ।
ಅಕ್ಷಮಾಲಾಂಚ ಪದ್ಮಂಚ ನಾಗಶೂಲಂ ಪಿನಾಕಿನಂ । ಡಮರುಂ ವೀಣಬಾ
ಣಂಚಶಂಖಚಕ್ರ ಕರಾನ್ವಿತಂ । ಕೋಟಿಸೂರ್ಯ ಪ್ರತೀಕಾಶಂ ಸರ್ವಜೀವ
ದಯಾಪರಂ । ದೇವದೇವಂ ಮಹಾದೇವಂ ವಿಶ್ವಕರ್ಮ ಜಗದ್ಗುರುಂ । ಪ್ರಸ
ನ್ನವದನಂಧ್ಯಾಯೇತ್ಸರ್ವವಿಘ್ನೋಪಶಾಂತಯೇ । ಅಭೀಪ್ಸಿತಾರ್ಥಸಿದ್ಧ್ಯರ್ಥಂ
ಪೂಜಿತೋಯಸ್ಸುರೈರಪಿ । ಸರ್ವವಿಘ್ನ ಹರಂದೇವಂ ಸರ್ವವಿಘ್ನವಿವರ್ಜಿತಂ
ಆಹುಃಪ್ರಜಾನಂ ಭಕ್ತಾನಾ ಮತ್ಯಂತಂ ಭಕ್ತಿಪೂರ್ವಕಂ । ಸೃಜಂತಂ ವಿಶ್ವ
ಕರ್ಮಾಣಂ ನಮೊ ಬ್ರಹ್ಮ ಹಿತಾಯಚ ॥ ಧ್ಯಾಯಾಮಿ-ಆವಾಹಯಾಮಿ-
ಆಸನಂ ಸಮರ್ಪಯಾಮಿ-ಪಾದಯೋಃ ಪಾದ್ಯಂ ಸಮರ್ಪಯಾಮಿ-ಹಸ್ತ
ಯೋರರ್ಘ್ಯಂ ಸಮರ್ಪಯಾಮಿ-ಆಚಮನೀಯಂ ಸಮರ್ಪಯಾಮಿ-ಸ್ನಾನಂ
ಸಮರ್ಪಯಾಮಿ-ವಸ್ತ್ರಂ ಸಮರ್ಪಯಾಮಿ- ಯಜ್ಞೋಪವೀತಂ ಸಮರ್ಪ
ಯಾಮಿ-ಆಭರಣಂ-ಸಮರ್ಪಯಾಮಿ- ಗಂಧಂ-ಸಮರ್ಪಯಾಮಿ-ಅಕ್ಷತಾನ್
ಸಮರ್ಪಯಾಮಿ-ಪುಷ್ಪಾಣಿ ಸಮರ್ಪಯಾಮಿ- ಧೂಪಮಾಘ್ರಾಪಯಾಮಿ-
ದೀಪಂ ದರ್ಶಯಾಮಿ-ಗುಡೋಪಹಾರಂ ಫಲಂ ನೈವೇದ್ಯಂ ಸಮರ್ಪಯಾಮಿ
ತಾಂಬೂಲಂ ಸಮರ್ಪಯಾಮಿ-ಸುವರ್ಣಪುಷ್ಪಂಸಮರ್ಪಯಾಮಿ-ಸರ್ವೋ
ಪಚಾರಪೂಜಾನ್ ಸಮರ್ಪಯಾಮಿ ॥

## ವಾ ಸ್ತು ಪೂ ಜೆ.

ಶ್ಲೋ॥ ವಾಸ್ತುಮೂರ್ತಿಃಪರಂಜ್ಯೋತಿ ರ್ವಾಸ್ತುದೇವಃ ಪರಶ್ಶಿವಃ ।
ವಾಸ್ತುದೇವಸ್ತು ಸರ್ವೇಷಾಂವಾಸ್ತುದೇವಂನಮಾಮ್ಯಹಂ॥ ವಾಸ್ತು
ದೇವತಾಭ್ಯೋನಮಃ ಸರ್ವೋಪಚಾರ ಪೂಜಾಂ ಸಮರ್ಪಯಾಮಿ ॥

ಟೀ|| ಈ ಪ್ರಕಾರವಾಗಿ ಪರಮಶಿವ ಸ್ವರೂಪನಾದ ವಿಶ್ವಕರ್ಮ ಬ್ರಹ್ಮನನ್ನೂ ಗಣಾಧಿಪತಿಯನ್ನೂ ವಾಸ್ತುಪುರುಷನನ್ನೂ ಸಹ ಷೋಡಶೋಪ ಚಾರಂಗಳಿಂ ಗೈದು, ವಾಸ್ತ್ವಧಿ ದೇವತೆಗಳಿಂ ಪೂಜಿಸಬೇಕು.

### ಮನೆಗಳಿಂ ಕಟ್ಟುವದಕ್ಕೆ ಮಾಸಗಳ ಫಲ.

ಶ್ಲೋ|| ಗೃಹಸಂಸ್ಥಾಪನಂಚೈತ್ರೇಧನಹಾನಿರ್ಮಹಾಭಯಂ | ವೈಶಾಖೇಶುಭದಂವಿದ್ಯಾತ್ಜ್ಯೇಷ್ಠೇತುಮರಣಂಧ್ರುವಂ| ಆಷಾಢೇಗೋಕುಲಂ ಹಂತಿಶ್ರಾವಣೇಪುತ್ರವರ್ಧನಂ (ಭೃತ್ಯವರ್ಧನಂ)| ಪ್ರಜಾರೋಗಂಭಾದ್ರಪತೇಕಲಹೋಶ್ವಯುಜೇತಥಾ|ಕಾರ್ತಿಕೇಧನಲಾಭಸ್ಸ್ಯಾನ್ಮಾರ್ಗಶೀರ್ಷೇಮಹಾಭಯಂ| ಪುಷ್ಯೇಚಾಗ್ನಿಭಯಂವಿಂದ್ಯಾನ್ಮಾಘೇತುಬಹುಪುತ್ರವಾನ್ | ಫಾಲ್ಗುನೇರತ್ನಲಾಭಸ್ಸ್ಯಾನ್ಮಾನಾನಾಂಚ ಶುಭಾಶುಭಂ ||

ಟೀ|| ಗೃಹಗಳು ಕಟ್ಟುವದಕ್ಕೆ ಚೈತ್ರಮಾಸದಲ್ಲಿ ದ್ರವ್ಯ ನಾಶನವು ಭಯವೂ ಉಂಟಾಗುವುದು, ವೈಶಾಖದಲ್ಲಿ ಶುಭವು, ಜ್ಯೇಷ್ಠದಲ್ಲಿ ಮರಣವು ಆಷಾಢಮಾಸದಲ್ಲಿ ಪಶುನಾಶನವು ಶ್ರಾವಣ ಮಾಸದಲ್ಲಿ ಕಲಹ ...ಕಾರ್ತಿಕ ಮಾಸದಲ್ಲಿ ದ್ರವ್ಯ ಸಿಕ್ಕುವದು, ಮಾರ್ಗಶೀರ್ಷದಲ್ಲಿ ಬಹಳ ಭಯವು, ಪುಷ್ಯದಲ್ಲಿ ಅಗ್ನಿಭಯವು, ಮಾಘದಲ್ಲಿ ಅಧಿಕ ಪುತ್ರಲಾಭವು, ಫಾಲ್ಗುಣದಲ್ಲಿ ರತ್ನಲಾಭವು ಈ ಪ್ರಕಾರ ಮಾಸಗಳ ಶುಭಾಶುಭ ಫಲಗಳಂ ತಿಳಿವುದು.

### ಶುಭಕರವಾದ ಮಾಸಗಳು.

ಶ್ಲೋ|| ಮಾಘವೈಶಾಖ ಮಾಸೇಚ ಕಾರ್ತಿಕ್ಯಾಂ ಶ್ರಾವಣೇತಥಾ |
ಅನ್ಯಮಾಸಂಪರಿತ್ಯಜ್ಯ ಚಾತುರ್ಮಾಸಂಗೃಹೋತ್ತಮಂ ||

ಟೀ|| ಮಾಘ, ವೈಶಾಖ, ಕಾರ್ತಿಕ, ಶ್ರಾವಣ ಈ ಮಾಸಗಳು ಮನೆಗಳು ಕಟ್ಟುವದಕ್ಕೂ ದೇವಾಲಯಗಳು ಕಟ್ಟುವದಕ್ಕೂ ಪ್ರಶಸ್ತವಾದುವುಗಳು ಮಿಕ್ಕ ಎಂಟು ಮಾಸಗಳು ನಿಂದ್ಯಗಳು

### ಗ್ರಂಥಾಂತರದಲ್ಲಿ

ಶ್ಲೋ|| ಸೌಮ್ಯಫಾಲ್ಗುಣ ವೈಶಾಖ ಮಾಘಶ್ರಾವಣಕಾರ್ತಿಕಾಃ |
ಮಾಸಾಸ್ಸ್ಯುಗೃಹನಿರ್ಮಾಣೇಪುತ್ರಾರೋಗ್ಯಧನಪ್ರದಾಃ ||

ಟೀ|| ಮಾರ್ಗಶಿರ, ಫಾಲ್ಗುಣ, ವೈಶಾಖ, ಮಾಘ, ಶ್ರಾವಣ ಕಾರ್ತಿ

ಕ, ಈ ಆರು ಮಾಸಗಳು ಗೃಹ ಕಟ್ಟುವದಕ್ಕೆ ಯೋಗ್ಯಗಳೆಂದು ವಾಸ್ತು ಸಂಹಿತೆಯಲ್ಲಿ ಹೇಳಲ್ಪಟ್ಟಿಧೆ.

ಶ್ಲೋ॥ ವೈಶಾಖೆಶ್ರಾವಣೆಪೌಷಿ । ಕಾರ್ತಿಕೇಸೌಮ್ಯಮಾಸಿವಾ ॥
ಫಾಲ್ಗುಣೆ ಗೃಹನಿರ್ಮಾಣಂ ಧನಧಾನ್ಯಶುಭಾವಹಂ ॥

ಟೀ॥ ವೈಶಾಖ, ಶ್ರಾವಣ, ಕಾರ್ತಿಕ, ಮಾರ್ಗಶಿರ, ಫಾಲ್ಗುಣ, ಈ ಮಾಸಗಳಲ್ಲಿ ಮಂದಿರವಂ ಕಟ್ಟಿದರೆ ಧನವು, ಧಾನ್ಯವು ಉಂಟಾಗಿ ಶುಭಕರವಾಗಿರುವದೆಂದು ವಕ್ಷ್ಯಾಂತರವು, ಮತ್ತು ಕಾಮಿಕಾಗಮದಲ್ಲಿ ಶ್ಲೋ॥ ಅಥಕಾಲಂಪ್ರವಕ್ಷ್ಯಾಮಿಸರ್ವೇಷಾಂತುಸುಖಾವಹಂ।ಮಾಘಮಾಸಂ ವಿನಾ ಶಸ್ತಂ ಭಾನೋರಯನ ಮುತ್ತರಂ । ದಕ್ಷಿಣೆ ತ್ವರಿತೆಮಾಸೌ ಕಾರ್ತಿಕಾಶ್ವಯುಜಾವಪಿ । ಶ್ರಾವಣಶ್ಚ ವಿಧೀಯಂತೆ ತದನ್ಯೇನಿಂದಿತಾ ಮತಾಃ ॥ ಎಂದು ಹೇಳಿರುವದ್ದರಿಂದಾ ಪುಷ್ಯ ಫಾಲ್ಗುಣ. ಚೈತ್ರ, ವೈಶಾಖ, ಜ್ಯೇಷ್ಠ ಕಾರ್ತೀ, ಆಶ್ವಯುಜ, ಶ್ರಾವಣ, ಈ ೮ ಮಾಸಗಳು ಉತ್ತಮಗಳೆಂದು ತಿಳಿಯತಕ್ಕದ್ದು.

### ಅರಮನೆಗಳು ಕಟ್ಟುವದಕ್ಕೆ

ಶ್ಲೋ॥ ಆಷಾಢಚೈತ್ರಾಶ್ವಯುಜೋರ್ಜಮಾಘ ಜ್ಯೇಷ್ಠೇಶುಚಪ್ರೋಷ್ಠಪದೇಚಮಾಸಃ । ನಿಕೇತನಾನಾಂಜಟನಂನೃಪಾಣಾಂಯೋಗೀಶ್ವರಾಚಾರ್ಯಮತೇನಶಸ್ತಂ ॥

ಟೀ॥ ಆಷಾಢ, ಚೈತ್ರ, ಆಶ್ವೀಜ, ಕಾರ್ತಿಕ, ಮಾಘ, ಜ್ಯೇಷ್ಠ ಭಾದ್ರಪದ, ಈ ಮಾಸಗಳಲ್ಲಿ ರಾಜಮಂದಿರಗಳಂ ನಿರ್ಮಿಸಲು ಯೋಗ್ಯವೆಂದು ಸನತ್ಕುಮಾರ ಯೋಗೀಶ್ವರರಿಗೆ ಸಮ್ಮತವು.

ಶ್ಲೋ॥ ನಭಾಸ್ತಪಸ್ಯಮಾಸೌತೌ ಸಮ್ಮತೌಪುರಮಂದಿರೆ । ಸಾಧಾರಣ ಗೃಹಾರಂಭೆ ಪುಷ್ಯಾಷಾಢೌಚಸಮ್ಮತಾ । ವಾನಶಾಲಾಯಜ್ಞಶಾಲಾ ಮಾರ್ಗಶೀರ್ಷೇಚ ಫಾಲ್ಗುಣೆ । ರಥ್ಯಾಗೇಹಮಠಾದೌತು ಸಹಾಶ್ಚ ಶುಚಿರೇವಚ। ಪ್ರಧಾನಗೃಹನಿರ್ಮಾಣ ವಿಷಯಂದೋಷಕೀರ್ತನಂ । ಯದಿಕುರ್ಯಾದಚಿರೇಣಮಹತೀಮಾಪದಂಭಜೇತ್ ॥

ಟೀ॥ ಶ್ರಾವಣ, ಫಾಲ್ಗುಣ ಮಾಸಗಳು ಪಟ್ಟಣಗಳಲ್ಲಿ ಗೃಹಕಟ್ಟಲಿಕ್ಕೂ ಪುಷ್ಯ, ಆಷಾಢ ಮಾಸಗಳು ಸಾಧಾರಣ ಮನೆ ಕಟ್ಟಲಿಕ್ಕೂ, ವಾನ

ಶಾಲೆಯು ಯಜ್ಞಶಾಲೆಯು ಕಟ್ಟಲಿಕ್ಕೆ ಮಾರ್ಗಶಿರ, ಫಾಲ್ಗುಣ ಮಾಸಗಳೂ, ಊರಿನೊಳಗೆ ಪ್ರಧಾನವಾಗಿರತಕ್ಕ ಚಾವಡಿ ಕಛೇರಿ ಮೊದಲಾದ ಕಟ್ಟಡಗಳು ಮಠಮೊದಲಾದವುಗಳಿಗೂ ಮಾರ್ಗಶೀರ್ಷಮಾಸವೂ, ಆಷಾಢ ಮಾಡವೂ ಯೋಗ್ಯಗಳಾಗಿರುವವು, ಮೇಲೆ ಹೇಳಲ್ಪಟ್ಟ ನಿಷಿದ್ಧಮಾಸಗಳು, ಪ್ರಧಾನ ಗೃಹ ಕಟ್ಟುವದರಲ್ಲಿ ದೋಷಗಳೆಂದು ತಿಳಿಯತಕ್ಕದ್ದು, ಶಾಸ್ತ್ರವಂ ವಿಚಾರಿಸದೆ ನಿಷಿದ್ಧ ಮಾಸಾದಿಗಳಲ್ಲಿ ಗೃಹವಂ ಕಟ್ಟಿದರೆ ಶೀಘ್ರವಾಗಿ ಆಪತ್ತುಗಳು ಸಂಭವಿಸುವವು.

ರಾ ಶಿ ಫ ಲ ಗ ಳು.

ಶ್ಲೋ॥ ಗೃಹಸಂಸ್ಥಾನಂ ಸೂರ್ಯೇ ಮೇಷಸ್ಥೇತುಮಹದ್ಭಯಂ। ವೃಷಭೇಧನಲಾಭಸ್ಸ್ಯಾನ್ಮಿಥುನೇಮರಣಂಧ್ರುವಂ॥ ಕುಳೀರೇಪಶುನಾಶಸ್ಸ್ಯಾತ್ಸಿಂಹ್ಮೆ ಪುತ್ರವಿರ್ಧನಂ। ಕನ್ಯಾರೋಗಂತುಲಾಸೌಖ್ಯಂವೃಶ್ಚಿಕೇಧನವರ್ಧನಂ! ಮಹಾಹಾನಿಸ್ತುಧನುಷಿಮಕರೇಚಾಗ್ನಿಜಂಭಯಂ। ಕುಂಭೇತುರತ್ನಲಾಭಸ್ಸ್ಯಾನ್ಮೀನೇಸರ್ವಭಯಾವಹಂ। ಸ್ಥಿರರಾಶಿಸ್ಥಿತೇಸೂರ್ಯೇಶೋಭನಂಗೃಹಕರ್ಮಜ। ಚರೇತುಮಧ್ಯಮಂ ವಿಂದ್ಯಾದ್ದ್ವಿಸ್ವಭಾವೇತುನಿಂದಿತಂ॥

ಟೀ॥ ಸೂರ್ಯನು ಮೇಷರಾಶಿ ಗತನಾಗಿರುವಲ್ಲಿ ಮನೆಯನ್ನು ಕಟ್ಟಿದರೆ ತುಂಬಾ ಭಯವು ಸಂಭವಿಸುವದು, ವೃಷಭ ರಾಶಿಯಲ್ಲಿ ಧನವುಂಟಾಗುವದು, ಮಿಥುನರಾಶಿಯಲ್ಲಿ ಮರಣವುಂಟಾಸುವದು, ಕರ್ಕಾಟಕ ರಾಶಿಯಲ್ಲಿ ಪಶುನಾಶನವಾಗುವದು, ಸಿಹ್ಮರಾಶಿಯಲ್ಲಿ ತುಂಬಾ ಪುತ್ರವಂತನಾಗುವನು, ಕನ್ಯಾರಾಶಿಯಲ್ಲಿ ಜಾಡ್ಯವುಂಟಾಗುವದು, ತುಲಾ ರಾಶಿಯಲ್ಲಿ ಸೌಖ್ಯವುಂಟಾಗುವದು, ವೃಶ್ಚಿಕ ರಾಶಿಯಲ್ಲಿ ಧನಾಭಿವೃದ್ಧಿಯಾಗುವದು, ಧನೂರಾಶಿಯಲ್ಲಿ ಬಹಳ ಹಾನಿಯುಂಟಾಗುವದು, ಮಕರರಾಶಿಯಲ್ಲಿ ಬೆಂಕಿಯಿಂದ ಭಯವುಂಟಾಗುವದು, ಕುಂಭರಾಶಿಯಲ್ಲಿದ್ದರೆ ರತ್ನಲಾಭವುಂಟಾಗುವದು, ಮೀನರಾಶಿಯಲ್ಲಿ ಎಲ್ಲಾ ಭಯವೂ ವುಂಟಾಗುವದು, ಸ್ಥಿರರಾಶಿಗಳಾದ ವೃಷಭ ಸಿಹ್ಮ ವೃಶ್ಚಿಕ ಕುಂಭ ಈ ರಾಶಿಗಳಲ್ಲಿ ಮನೆಕಟ್ಟಿದರೆ ಬಹಳ ಉತ್ತಮ, ಚರರಾಶಿಗಳಾದ ಮೇಷಕರ್ಕಾಟಕ ತುಲ ಮಕರ ಈ ರಾಶಿಗಳಲ್ಲಿ ಮಧ್ಯಮ ಫಲವಂ ಕೊಡುವದು, ದ್ವಿಸ್ವಭಾವ ರಾಶಿಗಳಾದ ಮಿಥುನ ಕ

ನ್ಯಾ ಧನುಸ್ಸು ಮೀನ ಈ ರಾಶಿಗಳು ಬಹಳ ನಿಂದ್ಯಗಳು ಚರಸ್ಥಿರ ರಾಶಿಗಳಲ್ಲಿ ಸೂರ್ಯನಿರುವಾಗ್ಯೆ ಮನೆ ಕಟ್ಟಿದರೆ ಧನಪ್ರದವೆಂದು ಕಾಲಾನ್ವಿತಕಾರರು ಒಂದೇ ಫಲವಂ ಹೇಳಿದ್ದಾರೆ ಆದರೂ ಕಾಮಿಕಾಗಮದಲ್ಲಿ. ಉತ್ತಮ ಸ್ಥಿರರಾಶಿನ್ಯಾಸ್ಮಧ್ಯಮಸ್ತೂಭಯಾತ್ಮಕಃ| ವಿಸರ್ಜ್ಯಶ್ಚರರಾಶಿಸ್ತುಸಚೇಜ್ಜೀವಸ್ಚಭಪ್ರದಃ || ಎಂದಿರುವದ್ದರಿಂದ ಚರರಾಶಿಗಳಲ್ಲಿ ಗುರುವಿದ್ದರೆ ಕಟ್ಟಬಹುದು.

ಶ್ಲೋ|| ಗುರುಭಾರ್ಗವಯೋರ್ಮೌಢ್ಯೇಬಾಲವೃದ್ಧಾಸ್ತಯೋರಪಿ |
ಚಾತುರ್ಮಾಸ್ಯೇಶೂನ್ಯಮಾಸೇಗೃಹಕರ್ಮನಕಾರಯೇತ್ ||

ಟೀ||ಗುರು ಶುಕ್ರ ಮೂಢದಲ್ಲಿಯೂ(ಅಸ್ತಮಿಸಿ ಯಿರುವಾಗಲೂ)ಬಾಲವೃದ್ಧ ಕಾಲದಲ್ಲಿಯೂ,ಚಾತುರ್ಮಾಸ್ಯದಲ್ಲಿಯೂ,ಶೂನ್ಯಮಾಸದಲ್ಲಿಯೂ ಮನೆಗಳಂ ಕಟ್ಟುವದಕ್ಕೆ ಪ್ರಾರಂಭಿಸಬಾರದು ಮತ್ತು ಕಾಮಿಕಾಗಮದಲ್ಲಿ, ಶ್ಲೋ || ಗುರಭಾರ್ಗವಚಾಂದ್ರೀಣಾಮುದಯಸ್ಸಂಪ್ರಶಸ್ಯತೆ | ಗುರೂದಯಸ್ತುವಿಪ್ರಾಣಾಂ-ಭೂಪತೀನಾಂಭೃಗೂದಯಃ | ವಿಶಾಂಬುಧೋದಯಶ್ಚೈವಶೂದ್ರೇಷ್ವೈವಂ ವಿಧೀಯತೆ || ಎಂದಿರುವದರಿಂದ ಗುರೂದಯವು ಬ್ರಾಹ್ಮಣರಿಗೂ, ಶುಕ್ರೋದಯವು ಕ್ಷತ್ರಿಯರಿಗೂ, ಬುಧನ ಉದಯವು ವೈಶ್ಯ ಶೂದ್ರರಿಗೂ ಗೃಹನಿರ್ಮಾಣದಲ್ಲಿ ಶುಭಕರವು.

ಶ್ಲೋ||ವಾಸ್ತುಕರ್ಮಪ್ರಶಸ್ತಂನಾ ತ್ಸೂರ್ಯೇ ಮೂಲತ್ರಿಕೋಣಗೇ | ಗೃಹಾರಂಭಃಪ್ರಶಸ್ತಶ್ಚಕುರ್ಯಾಚ್ಛ್ರಾವಣಮಾಸಕೇ ||

ಟೀ|| ಚಾತುರ್ಮಾಸದಲ್ಲಿ ನಿಷಿದ್ಧಕ್ಕೆ ಅಪವಾದವಂ ಹೇಳುತ್ತಾನೆ ಸೂರ್ಯನು - ಮೂಲತ್ರಿಕೋಣ ರಾಶಿಯಾದ ಸಿಹ್ಮದಲ್ಲಿದ್ದರೆ ಗೃಹಗಳನ್ನೂ ದೇವಾಲಯಗಳನ್ನೂ ಶ್ರಾವಣ ಮಾಸದಲ್ಲಿ ಕಟ್ಟಬಹುದು ಇಲ್ಲದಿದ್ದರೆ ಕಟ್ಟಕೂಡದು.

### ಮೇಷ ಚೈತ್ರಾದಿ ಮಾಸಫಲ.

ಶ್ಲೋ||ಕಲಹಂಮೇಷಚೈತ್ರೇಚವೈಶಾಖಿವೃಷಭೇಧನಂ|ಮಿಥುನಜ್ಯೇಷ್ಠದಾರಿದ್ರ್ಯಂ | ಕರ್ಕ್ಯಾಷಾಢೇತುದಗ್ಧಕಂ|ಸಿಹ್ಮಶ್ರಾವಣಕೆಸೌಖ್ಯಂ ಮೃತ್ಯುಂಭಾದ್ರಪದಾಂಗನಾ|ಅಶ್ವೀಜೇತುತುಲಾರೋಗಂಕಾರ್ತಿಕ್ಯಾಂ

ವೃಶ್ಚಿಕಂ ಶುಭಂ|ಮಾರ್ಗೇಧನುಷ್ಪೌಷೇ ಹಾನೌಖ್ಯಂನಕ್ರಪುಷ್ಯೇಚವರ್ಧ
ನಂ | ಮಾಷೇ ಚಾಗ್ನಿಭಯಂ ಮಾಘೇ ಮೀನಫಾಲ್ಗುಣಹಾನಿಕೃತ್ |

ಟೀ|| ಮೇಷ ಚೈತ್ರದಲ್ಲಿ ಮನೆ ಕಟ್ಟಿದರೆ ಕಲಹವುಂಟಾಗುವದು,
ವೃಷಭ ವೈಶಾಖದಲ್ಲಿ ದ್ರವ್ಯವು;ಮಿಥುನ ಜ್ಯೇಷ್ಠದಲ್ಲಿ ದರಿದ್ರವು ಕರ್ಕಾ
ಟಕಾಷಾಢದಲ್ಲಿ ಅಗ್ನಿಭಯವು, ತುಲಾಶ್ವೀಜದಲ್ಲಿ ವ್ಯಾಧಿಯು, ವೃಶ್ಚಿಕ
ಕಾರ್ತೀಕದಲ್ಲಿ ಶುಭವು, ಧನುಮಾರ್ಗಶಿರದಲ್ಲಿ ಬಹಳ ಸೌಖ್ಯವು ಮಕರ
ಪುಷ್ಯದಲ್ಲಿ ಹಾನಿಯು ಉಂಟಾಗುವದು.

ಶ್ಲೋ|| ಭಾನುವಾರೇಕೃತಂವೇಶ್ಮ ವಹ್ನಿನಾದಹ್ಯತೇಚಿರಾತ್ | ಚಾಂ
ದ್ರೇವೃದ್ಧಿರ್ಭವೇಚ್ಛುಕ್ಲೇ ಕ್ಷೀಯತೇಕೃಷ್ಣಪಕ್ಷಕೇ || ಭೌಮವಾರೇತದಂ
ಶೇವಾತಲ್ಲಗ್ನೇ ವಸ್ತುಮುಪಿವಾ | ದಹ್ಯತೇತದ್ಗೃಹಂಶೂನ್ಯಂ ಕರ್ತುರ್ಮ
ರಣಮೇವಚ| ಬುಧವಾರೆಧನೈಶ್ವರ್ಯಂ ಸುಖಪುತ್ರಫಲಾಧಿಕಂ|ಗುರು
ವಾರೇಚಿರಂಹ್ಯೇಸ್ತಂ ದವಾರೆತಸ್ಕರಾಣಾಂಭಯಾವಹಃ ||

ಟೀ|| ಭಾನುವಾರದಲ್ಲಿ ಮನೆಯಂ ಕಟ್ಟಿದರೆ ಆ ಮನೆಯು ಬೆಂಕಿ
ಯಿಂದ ಬೇಗನೆ ಸುಟ್ಟು ಹೋಗುವದು, ಸೋಮವಾರದಲ್ಲಿ ಶುಕ್ಲ ಪಕ್ಷ
ದಲ್ಲಿ ವೃದ್ಧಿಯೈದುವದು,ಕೃಷ್ಣ ಪಕ್ಷದ ಸೋಮವಾರದಲ್ಲಿಕಲಹವುನಾಶವೂ
ವುಂಟಾಗುವದು,ಅಂಗಾರಕವಾರದಲ್ಲಿಯೂ ತದಂಶದಲ್ಲಿಯೂ ತಲ್ಲಗ್ನದಲ್ಲಿ
ಯೂ ಆ ಲಗ್ನಕ್ಕೆ ಏಳನೇ ಲಗ್ನದಲ್ಲಿಯೂ, ಶಂಕುವನ್ನು ಸ್ಥಾಪಿಸಿದರೂ
ಸ್ತಂಭ ಪ್ರತಿಷ್ಠೆ ಮಾಡಿದರೂ ಗೋಡೆಹಾಕಿದರೂ ಆ ಮನೆಯು ಬೇಗನೆ
ಸುಟ್ಟು ಹೋಗುವದಾಗಲಿ ಗೃಹಕರ್ತನು ಸಾಯುವದಾಗಲೀ ಮನೆಯು
ಹಾಳಾಗಿಯಾಗಲಿ ಆಗುವದು; ಬುಧವಾರದಲ್ಲಿ ಧನವೂ, ಐಶ್ವರ್ಯವೂ
ಉಂಟಾಗುವದಲ್ಲದೆ ಪುತ್ರಸಂಪತ್ತಿಯೂ ಸುಖವೂವುಂಟಾಗುವದು, ಗುರು
ವಾರದಲ್ಲಿ ಭೃತ್ಯರು ವಾಹನಗಳು ಧನವು ಧಾನ್ಯವೂ ಉಂಟಾಗುವದು,
ಶುಕ್ರವಾರದಲ್ಲಿ ಪುತ್ರಪೌತ್ರಾಭಿವೃದ್ಧಿಯಾಗಿ ಬಹಳ ಕಾಲ ಸುಖದಿಂದ ಬಾ
ಳುವರು, ಶನಿವಾರದಲ್ಲಿ ಮನೆಯು ಬಹುಕಾಲವಿದ್ದರೂ ಕಳ್ಳರಭಯ ಉಂ
ಟಾಗುವದು, ಆದ್ದರಿಂದಾ ಶುಕ್ಲಪಕ್ಷ ಸೋಮವಾರ ಬುಧವಾರ ಗುರು

ವಾರ ಶುಕ್ರವಾರ ಇವುಗಳು ಶುಭಕರಗಳು, ಭಾನುವಾರ ಕೃಷ್ಣಪಕ್ಷದ ಸೋಮವಾರ ಇವು ಕೆಟ್ಟವುಗಳು, ಶನಿವಾರವು ಮಧ್ಯಮ ಫಲ.

ಶ್ಲೋ॥ ಶುಭವಾರೇಶುಭಹೋರಾತ್ರೆಶ್ರೇಷ್ಠಾಸ್ಯಾದಶುಭೇಶುಭೇ ।
ಮಧ್ಯಮಂಚಾಧಮಂ ಪ್ರೋಕ್ತ ಮುಭಯೇಚಾ ಶುಭೌತಥಾ ॥

ಟೀ॥ ಶುಭಹೋರೆಯು ಶುಭವಾರವು ಶ್ರೇಷ್ಠವು ಕ್ರೂರವಾರವು ಶುಭ ಹೋರೆಯು ಮಧ್ಯಮವು ಕ್ರೂರ ವಾರವು ಕ್ರೂರಹೋರೆಯು ಅಧಮವು.

## ಯೋಗ್ಯವಾದ ನಕ್ಷತ್ರಗಳು.

ಶ್ಲೋ॥ ಮೃಗಶಿರಕರಪೂಷಾತ್ವಷ್ಟ್ರುಮಿತ್ರೋತ್ತರಾಖ್ಯಶ್ರವಣದಿತಿಜ
ಲೇಶಾವಾಶವೇದ್ರುಸ್ರುಭೇಚ|ಬಹುಸುತಧನವಂತುಸ್ತಂಭಸಂಸ್ಥಾಪ
ಸಂಸ್ಯಾದಿತಿಭವತಿಮುನೀಂದ್ರೋಮಾನವಾನಾಂಗೃಹಾಣಾಂ ॥

ಟೀ॥ ಮೃಗಶಿರ, ಹಸ್ತ, ರೇವತಿ, ಚಿತ್ತ, ಅನೂರಾಧ, ಉತ್ತರಾಷಾಢ, ಉತ್ತರಾಭಾದ್ರ, ಶ್ರವಣ, ಪುನರ್ವಸು, ಶತಭಿಷ, ಧನಿಷ್ಟ, ಅಶ್ವಿನಿ, ಈ ನಕ್ಷತ್ರಗಳಲ್ಲಿ ಸ್ತಂಭಪ್ರತಿಷ್ಠೆ ಮಾಡಿದರೆ ಪುತ್ರಧನ ಸ್ತ್ರೀಲಾಭವುಂಟಾಗಿ ಚನ್ನಾಗಿ ಬಾಳುವರೆಂದು ಸನತ್ಕುಮಾರನಿಂದ ಹೇಳಲ್ಪಟ್ಟಿರುತ್ತೆ. ಶ್ಲೋ॥ ನಾಸತ್ಯಾದಿತಿರೇವತೀಕರಗುರು ಶ್ರೋಣತಯೋಂದುತ್ತರಾ । ಮಿತ್ರತ್ವಷ್ಟ್ರು ವಿಧಾತುಭೇಷುಸುತದಾಸ್ತಂಭಪ್ರತಿಷ್ಠಾರ್ಥದಾ ॥ ಎಂದು ಕಾಲಾಮೃತದಲ್ಲಿ ಹೇಳಿರುವದ್ದರಿಂದ ಪುಷ್ಯ ನಕ್ಷತ್ರವೂ ರೋಹಿಣೀ ನಕ್ಷತ್ರವೂ ಸಹ ಪ್ರಶಸ್ತವೆಂದು ತಿಳಿಯತಕ್ಕದ್ದು ಹೀಗೆಂದು ಕಾಮಿಕಾಗಮದಲ್ಲಿ ಶ್ಲೋ॥ ರೋಹಿಣೀಚೋತ್ತರಾಸ್ತಿಸ್ರೋಹಸ್ತಂಸ್ವಾತಿಪುನರ್ವಸೂ । ಅನೂರಾಧಾಸ್ಯಯುಕ್ಸ್ನಾನಮ್ಯೆವೈಷ್ಣವಂವಾರುಣಮಘಾ । ಚಿತ್ತಶ್ರವಿಷ್ಠಾಪೌಷ್ಣಾಶ್ವಮನುಜೇಷುಪ್ರಸಂಶಿತಾಃ। ಎಂದಿರುವದರಿಂದ ಈ ನಕ್ಷತ್ರಗಳು ಶುಭಕರಗಳು.

ಶ್ಲೋ॥ ಶ್ರವಣಾಷಾಢಯೋಶ್ಚೈವರೋಹಿಣ್ಯಾಮುತ್ತರಾಶ್ರಯೆ ॥
ಆಶ್ಲೇಷಾಯಾಂಮೃಗಶಿರೇಚಗುರುಣಾಸಹಸಂಯುತೆ । ಗುರುವಾರೆ
ಕೃತಂವೇಶ್ಮವಾಜಯೋಗೇತಮುಚ್ಯತೆ । ತದ್ಗೃಹೇರಾಜಪುತ್ರಸ್ಸ್ಯಾ
ದ್ರಾಜ್ಯಂಭವತಿ ನಿಶ್ಚಯಃ ॥

ಟೀ॥ ಶ್ರವಣ, ಪೂರ್ವಾಷಾಢ, ರೋಹಿಣಿ, ಉತ್ತರ, ಉತ್ತರಾಷಾಢ,

ವುತ್ತರಾ ಭಾದ್ರ, ಆಶ್ಲೇಷಾ, ಮೃಗಶಿರ ಈ ನಕ್ಷತ್ರಗಳಲ್ಲಿ ಬೃಹಸ್ಪತಿ ಯಿರುವಾಗ ಗುರುವಾರದಲ್ಲಿ ಮನೆಯನ್ನು ಕಟ್ಟಿದರೆ ಅದು ರಾಜಯೋಗವೆನಿಸಿಕೊಳ್ಳುವುದು, ಆ ಮನೆಯಲ್ಲಿ ಪುತ್ರರು ಹುಟ್ಟಿದರೆ ಅವರಿಗ ರಾಜ್ಯವು ಲಭಿಸುವುದು.

ಶ್ಲೋ || ಅಶ್ವಿನೀಶತತಾರಂಚ ವಿಶಾಖಾದ್ರಾರ್ಚಚಿತ್ತಕಂ | ಧನಿಷ್ಠಾದಿತಿಭಂಶುಕ್ರಸಂಯುತಂಶುಕ್ರವಾಸರೆ| ಗೃಹಂನಾಟಕಶಾಲಾಂಚದೇವಾಗಾರಂಕೃತಂಶುಭಂ| ತದ್ವೇಶ್ಮನಿಪ್ರಾಜಾತ (ಪ್ರವಾಸ) ಸ್ತುಚಂ ದ್ರುವತ್ಪುಷ್ಟಿಮಾಪ್ನುಯಾತ್ ||

ಟೀ|| ಅಶ್ವಿನಿ, ಶತಭಿಷ, ವಿಶಾಖ, ಆದ್ರಾ್ರ, ಚಿತ್ತ, ಧನಿಷ್ಠ, ಪುನರ್ವಸು, ಈ ನಕ್ಷತ್ರಗಳಲ್ಲಿ ಶುಕ್ರನಿದ್ದು ಶುಕ್ರವಾರದಲ್ಲಿ ಗೃಹವು, ನಾಟಕಶಾಲೆ ದೇವಸ್ಥಾನ ಮೊದಲಾದದ್ದು ಕಟ್ಟಿದರೆ ಅದರೊಳು ಹುಟ್ಟಿದವರು ಅಥವಾ ವಾಸವಾಗಿರುವವರು ಶುಕ್ಲಪಕ್ಷದ ಚಂದ್ರನಂತೆ ವೃದ್ಧಿಯನ್ನೈದುವರು.

ಶ್ಲೋ|| ಅನೂರಾಧಾಚಭರಣೀ ಸ್ವಾತೀಜ್ಯೇಷ್ಠಾಚ ಭಾದ್ರಕಂ||ಧನಿಷ್ಠಾದಿಕಋಕ್ಷಂಚಶನೈಶ್ಚರಸಮನ್ವಿತಂ | ಶ್ರವನಾನಾಮಕಂ ಯೋಗಂಧನಧಾನ್ಯಾದಿ ಸಂಗ್ರಹಂ|ನತಸ್ಮಿನ್ಮಂದಿರಂಕಾರ್ಯಂಚೋರಬಾಧಾಭವೇದ್ಧ್ರುವಂ ||

ಟೀ|| ಅನೂರಾಧಾ, ಭರಣಿ, ಸ್ವಾತಿ, ಜ್ಯೇಷ್ಠ, ಪೂರ್ವಾಭಾದ್ರ, ಧನಿಷ್ಠೆ ಈ ಆರುನಕ್ಷತ್ರಗಳಲ್ಲಿಯೂ ಶನಿ ಇದ್ದದ್ದಾದರೆ ಶ್ರವನವೆಂಬ ಯೋಗವೆನಿಸುವುದು. ಈ ಯೋಗದಲ್ಲಿ ದ್ರವ್ಯವಂ ನಿಕ್ಷೇಪಿಸುವುದಕ್ಕೂ ಧಾನ್ಯವಂ ಕಣಜಗಳಲ್ಲಿ ಹಾಕುವುದಕ್ಕೂ ಪ್ರಶಸ್ತವಾಗಿರುವುದು ಮನೆ ಮಾತ್ರ ಕಟ್ಟಬಾರದು ಕಳ್ಳರಬಾಧೆಯುಂಟಾಗುವುದು.

ಶ್ಲೋ|| ಮಘಾಚರೇವತೀಚೈವಕೃತ್ತಿಕಾಪುಷ್ಯವಿವಚ | ಪೂರ್ವಫಲ್ಗುನಿಹಸ್ತೇಚ ಮೂಲಾಚೈವತು ಸಪ್ತಕಂ|ಅಂಗಾರಕೇಣಸಂಯುಕ್ತಂ ಕೃತಂಚೈವತುಮಂದಿರಂ | ಅಗ್ನಿನಾದಹ್ಯತೆ ಕ್ಷಿಪ್ರಂಪುತ್ರನಾಶಂಚ ಜಾಯತೇ ||

ಟೀ|| ಮಘೆ, ರೇವತಿ, ಕೃತ್ತಿಕೆ, ಪುಷ್ಯಮಿ, ಪುಬ್ಬ, ಮೂಲ, ಹಸ್ತ, ಈ ಏಳು ನಕ್ಷತ್ರಗಳಲ್ಲಿಯೂ ಕುಜನಿರುವಾಗ ಆ ವಾರದಲ್ಲಿ ಮನೆಯಂ ಕಟ್ಟಿ

ದರೆ ಆ ಮನೆಯು ಅಗ್ನಿಯಿಂದ ದಹಿಸಲ್ಪಡುವುದಲ್ಲದೆ ಪುತ್ರನಾಶನವೂ ಸಹ ಆಗುವದು.

ಶ್ಲೋ॥ ಸುದಿನೇವಾರನಕ್ಷತ್ರೇ ಸುಯೋಗಕರಣಾನ್ವಿತೆ ॥ ಚಂದ್ರಾನು ಕೂಲಿಸಂಪ್ರಾಪ್ತೇ ಸುಲಗ್ನೇಶುಕ್ಲಪಕ್ಷಕೆ । ಪ್ರಾರಭೇನ್ಮಂದಿರಂಕೃಷ್ಣ ಪಂಚಮ್ಯಂತಂಸಿತಚ್ಛದಃ । ಪ್ರೋಕ್ತಶ್ಚ ಸರ್ವಕಾರ್ಯೇಷು ಶುಭದಸ್ಸ್ಯಾ ನ್ನಸಂಶಯಃ ॥

ಟೀ॥ ಒಳ್ಳೆಯವಾರದಲ್ಲಿಯೂ, ತಿಥಿಯಲ್ಲಿಯೂ, ನಕ್ಷತ್ರದಲ್ಲಿಯೂ, ಯೋಗದಲ್ಲಿಯೂ, ಕರಣದಲ್ಲಿಯೂ, ಮಾಸದಲ್ಲಿಯೂ ಲಗ್ನದಲ್ಲಿಯೂ, ಶುಕ್ಲ ಪಕ್ಷದಲ್ಲಿಯೂ, ಚಂದ್ರತಾರಾಬಲ ಕೂಡಿರುವಾಗಲೂ, ಮನೆಯ ನ್ನು ಕಟ್ಟಿದರೆ ಒಳ್ಳೆಯದಾಗಿರುವದು, ಕೃಷ್ಣಪಕ್ಷದ ಪಂಚಮಿ ಪರಿಯಂತ ವೂ ಶುಕ್ಲಪಕ್ಷವೆನಿಸಿಕೊಳ್ಳುವದು. ಈ ವಿಷಯದಲ್ಲಿ ಕಾಮಿಕಾಗಮದಲ್ಲಿ ಶ್ಲೋ॥ ಶುಕ್ಲಪಕ್ಷಶ್ಚಭೊಸ್ಸ್ವಿಶ್ಚ ಸಪ್ತಮ್ಯಂತೋಪಿತೋಮತಃ । ಶುಕ್ಲೇ ಪಾದ್ಯತೃತೀಯಾಂಶಂಕೃಷ್ಣೆಚಾಂತ್ಯಂತುವಾತ್ಯಜೇತ್ ॥ ಬಹುಳ ಪಕ್ಷದ ಸಪ್ತಮಿ ಪರ್ಯಂತವೂ ಶುಕ್ಲಪಕ್ಷದಲ್ಲಿ ಪಂಚಮಿವರಿಗೂ ಕೃಷ್ಣಪಕ್ಷ ವೆಂತಲೂ ಅಥವಾ ಕೃಷ್ಣಪಕ್ಷದಲ್ಲಿ ದಶಮಿವರಿವಿಗೂ ಶುಕ್ಲಪಕ್ಷವೆಂತಲೂ ತಿಳಿಯಬೇಕು.

## ನಕ್ಷತ್ರಫಲ.

ಶ್ಲೋ॥ ಅಶ್ವಿನೀಶತ್ಯತೇತಾರಾ ಗೃಹಸ್ಥಾಪನಕರ್ಮಣಿ । ಭರಣೀಮ ರಣಂಕುರ್ಯಾತ್ಕೃತ್ತಿಕಾಮಂದಿರಂದಹೇತ್ । ರೋಹಿಣೀಧನಪುತ್ರಾ ಪ್ತಿಂಕುರ್ವತೇಗೃಹಿಣೇಯಶಃ । ಮೃಗಶೀರ್ಷಂವಪುಷ್ಕಾಂತಿಮಾರಿ ದ್ರ್ಯನಯುಕಾರಿಣೀ।ಪುನರ್ವಸೂಧನಪ್ರಾಪ್ತಿಂ ಪುಷ್ಯಾಕೃಷ್ಯಾದಿಮಾ ನದಾ । ಆಶ್ಲೇಷಾರಾಜಭಯದಾ ಮಘಾಲ್ಪಸುತದಾಯಿನೀ।ಫಲ್ಗು ನೀತ್ಪನ್ಸುಸುತ್ಯಂತ ಮುತ್ತರಾಬಹುಮಾನದಾ ॥ ಹಸ್ತಾಯಸ್ಸು ಸರ್ವದ್ಯಾಚಿತ್ರಾ ಚಿತ್ಯಾಡಯಾಂಬರಂ।ಸ್ವಾತ್ಯನ್ಯಮಂದಿರೆಸ್ಥಾನಂ ವಿಶಾಖಾಗ್ನಿಭಯಪ್ರದಾ ॥ ಅನೂರಾಧಾಸುಹೃದ್ವೃದ್ಧಿಂಕುರ್ಯಾದ್ಯೆಂ ದ್ರೀಕ್ಷ್ಣಂಭಯಂ।ಮೂಲಾಶತ್ರುವಿನಾಶಾಯಪೂರ್ವಾಷಾಢಾಜಲಾ ಪ್ಲವಂ । ಸ್ವಸ್ಯನ್ನುತಧನಾಮೋದಮಭಿಜಿಚ್ಛ್ರಿಯಮಿಚ್ಛತಿ ॥ ಶ್ರವ ಣಂ ಕೀರ್ತಿಪುಷ್ಟೀಚವಾನವಾಖ್ಯೋವಸುಪ್ರದಃ । ಶತತಾರಾಯು

ರಾರೋಗ್ಯಂ ಪೂರ್ವಾಭಾದ್ರಾಂಗಹೀನತಾಂ । ಅಹಿರ್ಬುಧ್ನ್ಯಸ್ತು
ದಾರಿದ್ರ್ಯಂಪೌಷ್ಣಂಪಶುವಿವರ್ಧನಂ । ಕುರ್ಯಾತ್ಕರ್ಮಂದಿನಂ
ದಾರಿದ್ರ್ಯಂಪೌಷ್ಣಂಪಶುವಿವರ್ಧನಂ । ಕುರ್ಯಾತ್ಕರ್ಮಂದಿನಂಚ
ಫಲಾನ್ಯೇತಾನಿಭಾರ್ಗವ ॥ ಗೃಹರೇಖಾಯದಾಚಂದ್ರಾಧಿಷ್ಠ್ಯಂಯು
ತ್ನೇನವರ್ಜಯೇತ್ ॥

ಟೀ॥ ಮನೆಗೆ ಸ್ತಂಭಪ್ರತಿಷ್ಟೆ ಮಾಡುವಾಗಲೂ, ಶಂಕುಸ್ಥಾಪನೆ ಮಾಡು ವಾಗಲೂ, ಈ ಕೆಳಗೆ ಬರುವ ಪ್ರಕಾರ ನಕ್ಷತ್ರಫಲಗಳಂ ತಿಳಿಯುವುದು ಅಶ್ವಿನಿಯು ಯೋಗ್ಯವಾಗಿರುವುದು, ಭರಣಿಯು ಮರಣವನ್ನುಂಟುಮಾ ಡುವುದು, ಕೃತ್ತಿಕೆಯು ಮನೆಯಂಸುಡುವುದು, ರೋಹಿಣಿಯು ದ್ರವ್ಯ ಪು ತ್ರ ಭಾರ್ಯೆ ಯಶಸ್ಸು ಇವುಗಳಂ ಕೊಡುವುದು, ಮೃಗಶಿರವು ದೇಹಕಾಂ ತಿಯಂ ಕೊಡುವುದು, ಆರಿದ್ರವು ಭಯವನ್ನು, ಪುನರ್ವಸುವು ಧನಪ್ರಾಪ್ತಿಯ ನ್ನು, ಪುಷ್ಯವು ಕೃಷಿ ಮೊದಲಾದ್ದನ್ನು, ಆಶ್ಲೇಷೆಯು ರಾಜಭಯವನ್ನು, ಮಘೆಯು ಸ್ವಲ್ಪ ಸಂತಾನವನ್ನು, ಹುಬ್ಬೆಯು ದೀನತ್ವವನ್ನು ಉತ್ತರೆಯು ತುಂಬಾ ಮಾನವನ್ನು, ಹಸ್ತೆಯು ಕೀರ್ತಿಯನ್ನು ಮಕ್ಕಳನ್ನು ಚಿತ್ತೆಯು ನಾನಾವಿಧ ಮನೆಗಳನ್ನು ವಸ್ತ್ರಗಳನ್ನು, ಸ್ವಾತಿಯು ಪರಗೃಹವಾಸವನ್ನು ವಿಶಾಖೆಯು ಅಗ್ನಿಭಯುವನ್ನು, ಅನೂರಾಧೆಯು, ಮಿತ್ರ ವೃದ್ಧಿಯನ್ನು, ಜ್ಯೇಷ್ಟೆಯು, ಹಸಿವು ಭಯವನ್ನು ಮೂಲವು ಶತ್ರುನಾಶನವನ್ನು, ಪೂರ್ವಾ ಷಾಡೆಯು ನೀರಿನ ಭಯವನ್ನು ಉತ್ತರಾಷಾಡೆಯುಮಕ್ಕಳನ್ನು ಧನವನ್ನು ಸಂತೋಷವನ್ನು ಅಭಿಜಿತ್ತು ಸಂಪತ್ತನ್ನು, ಶ್ರವಣವು ಕೀರ್ತಿಯನ್ನು ಪು ಷ್ಟಿಯನ್ನು ಧನಿಷ್ಟೆಯು ಭಂಗಾರವನ್ನು, ಶತಭಿಷೆಯು ಆಯುಸ್ಸು ಆರೋ ಗ್ಯವನ್ನು ಪೂರ್ವಾಭಾದ್ರೆಯು ಅಂಗಹೀನತ್ವವನ್ನು ಉತ್ತರಾಭಾದ್ರೆಯು ದ ರಿದ್ರವನ್ನು, ರೇವತಿಯು ಪಶುವೃದ್ಧಿಯನ್ನು,ಉಂಟುಮಾಡುವುದು; ಮತ್ತು ಒಳ್ಳೇನಕ್ಷತ್ರವಾದಾಗ್ಯೂ ಚಂದ್ರಾಧಿಷ್ಟಿತವಾಗಿದ್ದು ಗೃಹವೇಧೆ ಯುಂಟಾ ಗಿದ್ದರೆ ಸಲ್ಲದು.

ಮತಾಂತರಲ್ಲಿ. ಶ್ಲೋ॥ ರೋಹಿಣೀಮೃಗಚಿತ್ತಾಕರಾವಾಸವೋತ್ತ
ರವೇಶ್ಮಭಂ ಶ್ರವಣಂಚೈವಭಾನ್ಯೇಷ್ಟೌಪ್ರಶಸ್ತಾಗೃಹಕರ್ಮಣಿ ॥

ಟೀ॥ ರೋಹಿಣಿ, ಮೃಗಶಿರ, ಚಿತ್ತೆ, ಹಸ್ತ, ಉತ್ತರಾಷಾಢಾ, ಉತ್ತರೆ, ಶ್ರವಣ, ಧನಿಷ್ಟ, ಈ ಎಂಟು ನಕ್ಷತ್ರಗಳು ಮನೆ ಕಟ್ಟುವುದರಲ್ಲಿ ಪ್ರಶಸ್ತ

ವಾದುವುಗಳು ಶ್ಲೋ॥ ಸ್ವಾತೀಪುಷ್ಯಾನುರಾಧಾಚ ಶತಾಹಿರ್ಬುಧ್ನ್ಯ
ಪೌಷ್ಣಿಭಂಸಪ್ತಮುಖ್ಯಸಲಾಸ್ಯಾಹುಶ್ಶೇಷಾಣಿಪರಿವರ್ಜಯೇತ್ ॥

ಟೀ॥ ಸ್ವಾತಿ, ಪುಷ್ಯಮಿ, ಅನೂರಾಧಾ, ಶತಭಿಷ, ಉತ್ತರಾಭಾದ್ರ, ಅಶ್ವಿನಿ ರೇವತೀ ಈ ೭ ನಕ್ಷತ್ರಗಳು ಮುಖ್ಯಸುಫಲಗಳು ಕೊಡುವುವು, ಮಿಕ್ಕಾದುವು ಪರಿತ್ಯಜಿಸತಕ್ಕುವುಗಳು, ಮತ್ತು ಕಾಮಿಕಾಗಮದಲ್ಲಿ. ಶ್ಲೋ॥ ರೋಹಿಣೀ ಚೋತ್ತರಾಸ್ತಿಸ್ರೋ ಹಸ್ತಸ್ವಾತೀಪುನರ್ವಸೂ। ಅನೂರಾಧಾಶ್ವಯುಕ್ಸ್ನಿಸ್ಯಂವೈಷ್ಣವಂ ವಾರುಣಂಮಘಾ ॥ ಚಿತ್ರಾತ್ರವಿಶಾಖಾಪೌಷ್ಣಾಶ್ಚವಾನುಜೀಷುಪ್ರಶಂಸಿತಾಃ । ಪೂಜ್ಯಾಶತಭಿಷಶ್ಚೈವ ವಿಶಾಖಾ ಪೂರ್ವಜೈಸ್ಸದ । ದೇವೇಷುಕಥಿತಂರೌದ್ರಂ ಸರ್ವಮೇತಚ್ಚವೇಮತಂ । ಮಾಸುಷೆಪೌಷ್ಯಪೌಷ್ಣಾಶ್ಚತದನ್ಯೆನಿಂದಿತಾಸ್ತ್ವಿಹ ॥ ಎಂದಿರುವುದರಿಂದ ಈ ನಕ್ಷತ್ರಗಳೆಲ್ಲವೂ ಗ್ರಾಹ್ಯಗಳು.

## ತಿಥಿಫಲ.

ಶ್ಲೋ॥ ತಿಥಿಶ್ಶರೀರಂ ತಿಥಿರೇವಕಾರಣಂ ತಿಥಿಪ್ರಮಾಣಂ ತಿಥಿರೇವ
ಸಾಧನಂ । ತಿಥಿರ್ವಿನಾನಾತ್ರಶುಭೇಷುಸಾಧ್ಯಂ ತಿಥೇಃಫಲಂಪ್ರೋಕ್ತ
ಮಿದಂಮಹರ್ಷಿಣಾ ॥

ಟೀ॥ ಮನೆಗಳು ಕಟ್ಟುವುವಕ್ಕೂ ಮತ್ತೂ ಎಲ್ಲಾ ಶುಭಕಾರ್ಯಗಳಿಗೂ ತಿಥಿಯೇ ಕಾರಣವಾಗಿಯೂ, ಶರೀರವಾಗಿಯೂ, ಪ್ರಮಾಣವಾಗಿಯೂ, ಸಾಧನವಾಗಿಯೂ ಇರುವದರಿಂದ ಒಳ್ಳೇಯ ತಿಥಿಗಳಲ್ಲಿ ಮನೆಯನ್ನು ಕಟ್ಟಿ ಬೇಕು.

## ವಾಸ್ತುಪುರುಷ ಇರತಕ್ಕ ಲಕ್ಷಣ.

ಶ್ಲೋ॥ ಕನ್ಯಾದಿಮಾಸತ್ರಿತಯಂಚತುಷ್ಕೇವಾಮಶಾಯಿನಂ । ಪ್ರಾ
ಚ್ಯಾಂಚಪಶ್ಚಿಮೋದೀಚ್ಯೋರ್ದಕ್ಷವಾಸ್ತೋಶ್ಶಿರಃಕ್ರಮಾತ್ ॥

ಟೀ॥ ಕನ್ಯಾ, ತುಲಾ, ವೃಶ್ಚಿಕ ಈ ಮೂರು ಸಂಕ್ರಾಂತಿಗಳಲ್ಲೂ, ಮೂಡಲಕಡೆಯಲ್ಲಿ ಶಿರಸ್ಸುಳ್ಳವನಾಗಿ ದಕ್ಷಿಣದಿಕ್ಕನ್ನು ನೋಡುತ್ತಾ ಇರುವನು. ಧನುಸ್ಸು, ಮಕರ, ಕುಂಭ ಈ ಮೂರು ಸಂಕ್ರಾಂತಿಗಳಲ್ಲಿ ದಕ್ಷಿಣ ಶಿರಸ್ಸುಳ್ಳವನಾಗಿ ಪಡುವಲಕಡೆಯ ನೋಡುತ್ತಾ ಇರುವನು. ಮೀನ, ಮೇಷ, ವೃಷಭ ಈ ಮೂರರಲ್ಲಿಯೂ ಪಶ್ಚಿಮ ಶಿರಸ್ಸುಳ್ಳವನಾಗಿ ಬಡಗಣದಿಕ್ಕನ್ನು ನೋಡುತ್ತಾ ಇರುವನು. ಮಿಥುನ ಕರ್ಕಾಟಕ, ಸಿಹ್ಮ ಈ ಮೂರಲ್ಲಿಯೂ ಉತ್ತರ ಶಿರಸ್ಸುಳವನಾಗಿ ಮೂಡಲ ಕಡೆಯನ್ನು ನೋಡುತಿರುವನು.

ಶ್ಲೋ॥ ನಭಸ್ಯಾದಿಷು ಮಾಸೇಷು ತ್ರಿಷುತ್ರಿಷು ಯಥಾಕ್ರಮಂ ।
ಪೂರ್ವಾದಿದಿಕ್ಶಿರಾವಾಮಪಾರ್ಶ್ವಶಾಯಿಾ ಪ್ರದಕ್ಷಿಣಂ ॥

ಟೀ ॥ ವಾಸ್ತು ಪುರುಷನು, ಭಾದ್ರಪದ, ಆಶ್ವಯುಜ, ಕಾರ್ತೀಕ ಈ ಮೂರು ಮಾಸಗಳಲ್ಲಿಯೂ ಪೂರ್ವಶಿರಸ್ಸಾಗಿಯೂ ಮಾರ್ಗಶಿರ ಪುಷ್ಯ, ಮಾಘ ಈ ಮೂರು ಮಾಸಗಳಲ್ಲಿಯೂ, ದಕ್ಷಿಣ ಮುಖವಾಗಿಯೂ ಪಾಲ್ಗುಣ ಚೈತ್ರ, ವೈಶಾಖ, ಈ ಮೂರು ಮಾಸಗಳಲ್ಲಿಯೂ ಪಶ್ಚಿಮ ಶಿರಸ್ಸಾಗಿಯೂ ಜ್ಯೇಷ್ಟ, ಆಷಾಡ, ಶ್ರಾವಣ, ಈ ಮೂರು ಮಾಸಗಳಲ್ಲಿಯೂ ಉತ್ತರ ಮುಖವಾಗಿಯೂ ಎಡಮಗ್ಗಲಲ್ಲಿ ಮಲಗಿರುವನು.

ಶ್ಲೋ॥ ಯದ್ದಿಙ್ಮುಖೊ ವಾಸ್ತುಪು[illegible] ಕುರ್ಯಾತ್ತದ್ದಿಙ್ಮುಖಂ ಗೃಹಂ।
ಪ್ರತಿಕೂಲ ಮುಖಂಗೇಹಂ ಶೋಕರೋಗ ಭಯಾವಹಂ ॥

ಟೀ ॥ ವಾಸ್ತುಪುರುಷನು ಯಾವ ದಿಕ್ಕನ್ನು ನೋಡುತ್ತಾನೋ, ಅವನ ದೃಷ್ಟಿಗೆ ಇದಿರಾಗಿ ಮನೆಯ ಬಾಗಿಲನ್ನು ಇಟ್ಟು ಕಟ್ಟಿದರೆ ಬಹಳಲೇಸು ಇಲ್ಲದಿದ್ದರೆ ದುಃಖವೂ, ರೋಗವೂ ಭಯವೂ ವುಂಟಾಗಿರುವದು.

## ಶಂಕು ಮಾಡತಕ್ಕ ಕ್ರಮ.

ಶ್ಲೋ॥ ಶಂಕುಂತ್ರಿಧಾ ವಿಭಜ್ಯಾದ್ಯಂ ಚತುರಶ್ರಂದ್ವಿತೀಯಕಂ । ಅಷ್ಟಾಶ್ರಕಂತೃತೀಯಾಂ ಶಮನ ಶ್ರಮೃಜುಮವ್ರಣಂ ॥

ಟೀ॥ ಶಂಕುವನ್ನು ಮೂರು ಭಾಗ ಮಾಡಿ ಮೊದಲನೇ ಭಾಗವು ನಾಲ್ಕು ಮೂಲೆಗಳುಳ್ಳದಾಗಿಯೂ, ಯರಡನೇ ಭಾಗವು ೮ ಮೂಲೆಗಳುಳ್ಳದ್ದಾಗಿಯೂ, ಮೂರನೇ ಭಾಗವು ಗುಂಡಾಗಿಉಳ್ಳದ್ದಾಗಿಯೂ ಗೆಂಟು ವೊದಲಾದ್ದಿಲ್ಲದೆ ನೆಟ್ಟಗೆ ಇರುವದಾಗಿರಬೇಕು.

ಮತಾಂತರದಲ್ಲಿ,- ಶ್ಲೋ ॥ ಹಸ್ತಾರ್ಧಮಾನಂ ಶಂಕುಂಚ । ತ್ರಿಭಾಗಂ ತತ್ರಕಾರಯೇತ್।ಪೂರ್ವಭಾಗಂ ತ್ರಿಕೋಣಂಸ್ಯಾನ್ಮಧ್ಯಮಂಚತುರಶ್ರಕಂ । ಅಂತ್ಯಭಾಗಂಚಾಷ್ಟಕೋಣಂಘಾತಂಚೇಷ್ಟಾಂಗುಳತ್ರಯಂ॥

ಟೀ॥ ಬ್ರಾಹ್ಮಣಾದಿವರ್ಣಚತುಷ್ಟಯಕ್ಕೂ ಸಹ ೧೨ ಅಂಗುಲ ಶಂಕುವನ್ನುಮಾಡಿ ಅದಂ ಮೂರುಭಾಗಮಾಡಿ, ವೊದಲನೇ ಭಾಗವು ತ್ರಿಕೋಣವಾಗಿಯೂ, ಯರಡನೆಯದು ಚತುರಶ್ರವಾಗಿಯೂ ಮೂರನೆಯದು ಯೆಂಟು ಮೂಲೆಗಳುಳ್ಳದಾಗಿಯೂ ಘಾತವು ಗುಂಡಾಗಿ ಮೂರಂ

ಗುಳ ಪ್ರಮಾಣವುಳ್ಳದ್ದಾಗಿ ಮಾಡಬೇಕು. ಮತ್ತು ಕಾಲಾಮೃತದಲ್ಲಿ ಎಲ್ಲ ವರ್ಣದವರಿಗೂ ೧೨ ಅಂಗುಲ ಪ್ರಮಾಣವೇ ಹೇಳಿದ್ದಾಗ್ಯೂ ಮೊದಲನೆಯ ಭಾಗವು ೮ ಮೂಲೆಯಾಗಿಯೂ ೨ ನೆಯ ಭಾಗವು ೪ಮೂಲೆಯಾಗಿಯೂ ೩ನೆಯಭಾಗವು ಗುಂಡಾಗಿಯೂ ಮಾಡಬೇಕೆಂದಿರುತ್ತದೆ ಶ್ಲೋ॥ ತಚ್ಛಂಕುತ್ರಿವಿಧಂವಿಭಜ್ಯಸಮಶಸ್ತ್ರೋಧ್ರ್ವಾದಿಭಾಗತ್ರಯೇಷ್ವಷ್ಟಾಶ್ರಂಚತುರಶ್ರ ಮವ್ರಣಮೃಜುಂಚಾನಶ್ರಮೇವಂವಿಧಂ । ಸರ್ವೇಷಾಂಚವಿತಸ್ತಿಮಾತ್ರಮವಧಿಸ್ಸ್ವರ್ಣಾದಿರತ್ನಾನ್ವಿತಂಗಂಧಾದ್ಯೈರಪಿಪೂಜಿತಂಶುಭದಿನೇಶಂಕುಸ್ಯಸ್ಯನ್ಮಂಗಳೈ ॥ ಮತ್ತು ಕಾಮಿಕಾಗಮದಲ್ಲಿ. (ಶಂಕುಷ್ಷಡಂಗುಳೋನಾಹಸ್ತಾಂಭೋಗ್ಯೈಕಃ ॥ ಎಂದಿರುವದರಿಂದ ೧೨ ಅಂಗುಳವುಳ್ಳದ್ದು ಯೆಲ್ಲರಿಗೂ ಯೋಗ್ಯವೆಂದು ತಿಳಿಯತಕ್ಕದ್ದು.

ಶ್ಲೋ॥ ಶಂಕೋಷ್ಷಡಂಗುಳಂವೃತ್ತಂದ್ವಾದಶಾಂಗುಳಮುನ್ನತಂ । ಅವಕ್ರ
ಮವ್ರಣಂಕುರ್ಯಾನ್ನಿರ್ದೋಷದಾರುಭಿಃ । ಸ್ಯಾಚ್ಚತುರ್ವಿಂಶವಿಂಶಾ
ಷ್ಟಿದ್ವಾದಶಾಂಗುಳಕೈಃಕ್ರಮಾತ್ । ವಿಪ್ರಾದೀನಾಂ ಶಂಕುಮಾನಂ

ಟೀ॥ ಶಂಕುವನ್ನು ಆರಂಗುಳ ವೃತ್ತವುಳ್ಳದ್ದಾಗಿಯೂ ಹನ್ನೆರಡಂಗುಲವುದ್ದವುಳ್ಳದ್ದಾಗಿಯೂ ವಕ್ರವಿಲ್ಲದ್ದಾಗಿ ಗಂಟುಮೊದಲಾದ ದೋಷವಿಲ್ಲದೆಯೂ ಗಟ್ಟಿಯಾಗಿಯೂ ದೋಷವಿಲ್ಲದ್ದಾಗಿ ಮಾಡಬೇಕು, ಬ್ರಾಹ್ಮರಿಗೆ ೨೪ ಅಂಗುಲವೂ, ಕ್ಷತ್ರಿಯರಿಗೆ, ೨೦ ಅಂಗಲವೂ ವೈಶ್ಯರಿಗೆ ೧೬ ಅಂಗುಲವೂ ಶೂದ್ರಾದಿಗಳಿಗೆ ೧೨ ಅಂಗುಲವೂ ವುದ್ದವುಳ್ಳದಾಗಿ ಸ್ವರ್ಣವಸ್ತ್ರಾದಿಗಳಿಂದಾ ಅಲಂಕರಿಸಲ್ಪಟ್ಟುದಾಗಿರಬೇಕು. ಬ್ರಾಹ್ಮಣಾದಿ ವರ್ಣಗಳಿಗೆ ಭಿನ್ನಪ್ರಮಾಣ ವಿಷಯವು ಮುಹೂರ್ತಮಾರ್ತಾಂಡದಲ್ಲಿ ಹೀಗೆಯೆ ಹೇಳಲ್ಪಟ್ಟಿದೆ. ಶ್ಲೋ॥ ನಾಕಾಲೇತ್ರವಿಧೇಯಮುಕ್ತತರುಜೊಗ್ರ್ಯಾತ್ಸಿದ್ಧವಿಂಶಾಷ್ಟಹಃಕೃತ್ನಂಖ್ಯಾಂಗುಳಕಸ್ತ್ರಿಭಾಗಚತುರಶ್ರಾಷ್ಟಾಶ್ರಕಾನಶ್ರಕಃ॥ ಎಂದು ಹೇಳಿರುವದ್ದರಿಂದ ಆಯಾಯಾ ವರ್ಣದವರಿಗೆ ಮೇಲಿನ ಕ್ರಮದಂತೆ ಪ್ರಮಾಣವುಳ್ಳ ಶಂಕುಗಳನ್ನು ಮಾಡಿಸಬೇಕು, ಕಾಮಿಕಾಗಮದಲ್ಲಿ ಶ್ಲೋ॥ದೇವಾದೀನಾಂ ಶಿರೊಗ್ರಂನ್ಯಾದ್ದ್ವಿಜಾನಾಂಛತ್ರಸನ್ನಿಭಂ । ಕುಶಕೀಚಕಪತ್ರಾಭಂ ಭೂಪಾ

ನಾಂವೈಶ್ಯಜನ್ಮನಾಂ । ಕದಳೀಮುಕುಳಾಗ್ರಂಸ್ಯಾಚ್ಛೂದ್ರಾಣಾಂಮುಂಡಲಾಗ್ರಕಂ|| ಎಂದಿರುವವರಿಂದ ಶಂಕುವಿನ ಕೊನೆಯು ದೇವಸ್ಥಾನಗಳಿಗೆಶಿರಸ್ಸಿನ ಹಾಗೆಯೂ, ಬ್ರಾಹ್ಮಣರಿಗೆ ಕೊಡೆಯ ಹಾಗೆಯೂ, ಕ್ಷತ್ರಿಯರಿಗೆ ದರ್ಭೆಯಹುಲ್ಲು,ಬಿದಿರೆಲೆ ಇವುಗಳಹಾಗೆಯೂ, ವೈಶ್ಯರಿಗೆ ಬಾಳೆಯಮೊಗ್ಗಿನಹಾಗೆಯೂ, ಶೂದ್ರರಿಗೆ ಕತ್ತಿಯ ತುದಿಯುಹಾಗೆಯೂ ಮಾಡತಕ್ಕದ್ದು.

## ಶಂಕುವಿಗೆ ಯೋಗ್ಯವಾದ ವೃಕ್ಷಗಳು.

ಶ್ಲೋ|| ಅಶ್ವತ್ಥಂಖಾದಿರಂಚೈವನ್ಯಗ್ರೋಧಂದಂತಧಾವನಂ | ರಕ್ತಚಂದನಮುಖ್ಯಂತುಶ್ರೀಗಂಧಾಗರುರೇವಚ | ಸ್ವರ್ಣವಸ್ತ್ರೈರಲಂಕುರ್ಯಾಚ್ಛಂಕುಪೂಜಾವಿಧಿಂಶೃಣು ||

ಟೀ|| ಬ್ರಾಹ್ಮಣರಿಗೆ ಅಶ್ವತ್ಥ, ಕಗ್ಗಲಿ, ಕ್ಷತ್ರಿಯರಿಗೆ ಆಲ, ಕಗ್ಗಲಿ, ವೈಶ್ಯರಿಗೆ ಆಗರೂ, ಶ್ರೀಗಂಧವೂ, ಶೂದ್ರರಿಗೆ ಶ್ರೀಗಂಧ ಅಗರು ಈಪ್ರಕಾರ ಬ್ರಾಹ್ಮಣಾದಿಗಳಿಗೆ ಶಂಕುವುಗಳನ್ನು ಈ ಮರಗಳಿಂದ ಮಾಡಿಸುವುದುಮತ್ತು ಶಂಕುಯೊಗ್ಯ ಮರಗಳು ಗ್ರಂಥಾಂತರದಲ್ಲಿ||ಶ್ಲೋ||ಖದಿರಾರ್ಜುನಸಾಲೋತ್ಥಾಂಯುಗೆಪತ್ರತರೂದ್ಭವಂ|ರಕ್ತಚಂದನಪಾಲಾಶರಕ್ತಸಾಲಕೀಲಾಲಜಂ | ನಿಂಬಕಾರಂಜಕುಟಜವೈಣಕಂಬಿಲ್ವವೃಕ್ಷಕಂ|| ಎಂದು ಹೇಳಿರುವದರಿಂದ ಬಿಳೀಮತ್ತಿಯು, ಕಾಂಚಾಳ, ಮುತ್ತುಗ ಕೆಮ್ಮತ್ತಿ, ಬೇವು,ಹೊಂಗೆ, ಗಿರಿಮಲ್ಲಿಗೆ, ಬಿದಿರು ಬಿಲ್ವವು ಸಹ ಪರಿಗ್ರಹಿಸಬಹುದು. ಮತ್ತು ಕಾಲಾಮೃತದಲ್ಲಿ ಶಂಕುವಿಗೂ, ಮನೆಗೂ, ಕೂಡ ಮರಗಳಂ ಹೇಳುವುದರಲ್ಲಿ ವಿಶೇಷವೇನೆಂದರೆ, ||ಶ್ಲೋ|| ಕಾರಂಜಾರ್ಜುನಸಾಲನೀಪಕುಟಜಾಃಪಾರಾದಮಂದಾರಕಾಬಿಲ್ವಾಪ್ವೈಣಪಯುಗ್ಮಪತ್ರಖದಿರಾವೃಕ್ಷಾಶ್ಶುಭಾಸ್ಸದ್ಮಸು-ತ್ಯಾಜ್ಯಾದಗ್ಧವಿಭೀತಕಾಸ್ನುಹಿದಟಾನಿಂಬಾಶ್ಚಯೇಕಂಟಕಾ ಅಶ್ವತ್ಥಾಮ್ರಕಪಿತ್ಥ ತಾಳವ ಕುಳಪ್ಲಕ್ಷಾಅಗೆಸ್ತ್ಯಾದಯಃ|| ಹೊಂಗೆ, ಮತ್ತಿ,ಧೂಪದಗಿಡ, ಕಡಹದಗಿಡ, ಕೊಡಿಶೆಗಿಡ, ತಾಳೆ, ಪಾರಿಭದ್ರಕ, ಬಿದಿರು, ಕಂಜೆವಾಳ, ಕಗ್ಗಲಿ, ಇವುಗಳು ಶುಭಕರಗಳೆಂತಲೂ, ಸುಡಲ್ಪಟ್ಟವುಗಳು ತಾರೆ, ಕಳ್ಳಿ, ಆಲ, ಬೇವು, ಮುಳ್ಳುಳ್ಳಗಿಡಗಳು ಅಶ್ವತ್ಥ, ಮಾವು, ಬ್ಯಾಲ, ತಾಳಿಪವಡದಗಿಡ,ಬಸರಿ,ಅಗಸೆ,ಇವುಗಳು ಕೂಡದೆಂತಲೂ ಸಾಮಾನ್ಯವಾಗಿ ಹೇಳಿರುವದರಿಂದ ಇಲ್ಲಿ ಬಿಲ್ವ ಮೊದಲಾದವದ್ದು ಶಂಕುವಿಗೆ ಯೋಗ್ಯವಾಗಿಯೂ

ಮನೆಗೆ ಕೂಡದ್ದಾಗಿಯೂ, ಮತ್ತು ಕ್ಷತ್ರಿಯರಿಗೆ ಬೇವು ಅಶ್ವತ್ಥವು ಬಿಲ್ವಜ ವೃದ್ಧಿಕರಗಳೆಂದು ಗ್ರಂಥಾಂತರದಲ್ಲಿ ಹೇಳಿರುವವರಿಂದ ಶಂಕುವಿಗೆ ಯೋಗ್ಯಮರಗಳು ಶಂಕುವಿಗೂ, ಗೃಹಕ್ಕೆ ಯೋಗ್ಯವಾದವುಗಳನ್ನ ಗೃಹಕ್ಕೂ ಸಾಮಾನ್ಯವಾಗಿ ನಿಂದಿತವಾಗಿದ್ದು ಜಾತಿಯುಭೇದದಲ್ಲಿ ವುಕ್ತವಾಗಿದ್ದರೆ ಆಯಾಯಾ ಜಾತಿಗೆ ತಕ್ಕ ವೃಕ್ಷಗಳನ್ನ ಸೇರಿಸಬಹುದೆಂತಲೂ ತಿಳಿಯಬೇಕು. ಮನೆಗೆ ಯೋಗ್ಯವಾದ ಮರಗಳನ್ನ ಮುಂದೆ ಹೇಳುತ್ತೇವೆ.

### ಶಂಕು ಪೂಜಾ ವಿಧಿ.

ಶ್ಲೋ॥ ನಿಶಾಚಂದನಕರ್ಪೂರಕುಸುಮಾದ್ಯೈರಲಂಕೃತಂ। ಸಂವೇಷ್ಟಿತಪಟಂ ಶಂಕು ಸರ್ವಧಾನ್ಯೋಪರಿನ್ಯಸೇತ್। ಸ್ನಾತ್ವಾಗೃಹಪತಿಶ್ಶುದ್ಧಃಶುಕ್ಲವಸ್ತ್ರೈರಲಂಕೃತಃ ॥ ನವರತ್ನಾನಿಧಾನ್ಯಾನಿಚಾಷ್ಟಾದಶಯಥೋಚಿತಂ। ಹಿರಣ್ಯಮುತ್ಸಶ್ಚೈವಾಲಂಸ್ಥಣಗರ್ತೆನಿಧಾಪಯೇತ್ ॥ ಅವ್ಯತ್ಯೈಃಪುಣ್ಯಸಲಿಲೈಃಗಂಧಪುಷ್ಪಾಕ್ಷತಾದಿಭಿಃ । ಅಲಂಕೃತ್ಯಸುವಾದ್ಯೈಶ್ಚ ವೇಷ್ಟಿತಂ ಪಂಚಪಲ್ಲವೈಃ। ಏವಂ ಲಕ್ಷಣ ಸಂಯುಕ್ತಂ ಶಂಕುಂ ಕಲ್ಪ್ಯಶುಭೇದಿನೆ। ಷಡ್ವರ್ಗ ಶುದ್ಧಿಸವಿತ್ರೇಣ ಸೂತ್ರಿತೆನರಣಿತಲೆ । ಮೃದುಧ್ರುರ್ಕ್ಷಭೇದೇಷುರಿಕ್ತಾಮಾರ್ಕತೇದಿನೇ। ವ್ಯರ್ಕಾತವಾಗೆಲಗ್ನೇಷುಕ್ರೂರೈರಷ್ಟಮವರ್ಜಿತೈಃ । ನನ್ವೈವಸೆನಿಶಾನಾಥೆಕರ್ತುರಷ್ಟಮಸಂಯುತೆ। ಸ್ಥಿರಲಗ್ನೆಸ್ಥಿರಾಂಶೇವಾಶುಭಗ್ರಹನಿರೀಕ್ಷಿತೆ। ಸಂಯುತೆಚಂದ್ರಲಗ್ನೈಚ ಸ್ಥಾಪಯೇಚ್ಛಂಕುಮುತ್ತಮಂ। ಪುಣ್ಯಾಹವಾದ್ಯಘೋಷೈಶ್ಚವಿಪ್ರಾಶೀರ್ವಚನೈಸ್ಸಹ ॥

ಟೀ॥ ಮೇಲೆ ಹೇಳಲ್ಪಟ್ಟ ಪ್ರಕಾರ ಶಂಕುವಂ ಮಾಡಿ, ಅರಶಿನ ಗಂಧ, ಪಚ್ಚಕರ್ಪೂರ, ಹುಷ್ಪಗಳು ಮೊದಲಾದ್ದರಿಂಪ ಅಲಂಕಾರವನ್ನು ಗೈದು ಪಂಚಪಲ್ಲವಗಳಂ ಕಟ್ಟಿ ಕೆಳಗಡೆ ಸೂತ್ರಗಳಿಂದ ಚನ್ನಾಗಿ, ಬಂಧಿಸಿನೂತನ ವಸ್ತ್ರವಂಕಟ್ಟಿ ಶಂಕುವಿನ ಗುಣಿಯಲ್ಲಿ ಸಮಸ್ತ ಧಾನ್ಯಗಳು ನವರತ್ನಗಳು ಚಿನ್ನದಿಂದ ಮಾಡಿದ ಮೀನು ಹಾಮುಚಿ ಇವೆಲ್ಲವೂ ಹಾಕಿ ಮನೆ ಯಜಮಾನನು ಸ್ನಾನಮಾಡಿ, ಶುಭ್ರವಸ್ತ್ರಗಳನ್ನುಟ್ಟು ಶಂಕುವಿನ ಸಮೀಪದಲ್ಲಿ ಪೂರ್ವಾಭಿಮುಖವಾಗಿ, ಕುಳಿತುಕೊಂಡು ಜ್ಯೋಸ್ಯರು ಬ್ರಾಹ್ಮಣರು ಇವರುಗಳೊಡನೆ ಕೂಡಿ ವಾಸ್ತು ಪುರುಷನಂ ಸ್ಮರಿಸುತ್ತಾ ಗಣಪತಿಗೆ ಷೋಡಶೋಪಚಾರ ಪೂಜೆಯುಂಗೈದು ಬಳಿಕ ಬ್ರಾಹ್ಮ

ಣರನ್ನು ಶಿಲ್ಪಿಯನ್ನು ಪೂಜೆಮಾಡಿ, ಅವರ ಆಶೀರ್ವಾದವನ್ನು ಪಡೆದು ಆ ವ
ಸ್ತುಗಳಮೇಲೆ ಪುಣ್ಯಾಹಜಲವನ್ನೂ ಹಾಲನ್ನೂ ಹಾಕಿ ಗಂಧ ಪುಷ್ಪಾಕ್ಷತೆಗ
ಳನ್ನು ಹಾಕಿ ಶಂಕುವನ್ನಾಗಲಿ ಸ್ತಂಭವನ್ನಾಗಲಿ ಹಿಡಿದುಕೊಂಡು ಮಂಗ
ಳ ವಾದ್ಯಗಳೊಡನೆಯೂ, ವಿಪ್ರಾಶೀರ್ವಾದಗಳೊಡನೆಯೂ, ಧ್ರುವ ನಕ್ಷ
ತ್ರಗಳಲ್ಲಿಯೂ, ಆದಿತ್ಯ ಮಂಗಳವಾರಗಳಲ್ಲದೆಯೂ, ಈ ಲಗ್ನಗಳಲ್ಲದೆ
ಯೂ, ಕ್ರೂರಗ್ರಹಗಳಲ್ಲದೆಯೂ, ಷಷ್ಠಾಷ್ಟಮಗಳಲ್ಲದೆಯು ಕರ್ತೃವಿಗೆ
ಅಷ್ಟಮಚಂದ್ರನಾಗಲಿ ನೈಧನತಾರೆಯಾಗಲಿ ಚಂದ್ರತಾರಾಬಲ ವುಳ್ಳಲಗ್ನ
ದಲ್ಲಿ ಷಡ್ವರ್ಗಶುದ್ಧಿಯಾಗಿರುವ ಸೂತ್ರದಿಂದ ಕರ್ತೃಮಾಡಲ್ಪಟ್ಟ ಸ್ಥಳ
ದಲ್ಲಿ ಶುಭ ಲಗ್ನ ಸ್ಥಿರಾಂಶೆಯಲ್ಲಿ ನಿಲಿಸತಕ್ಕದ್ದು. ಈ ಶಂಕುಸ್ಥಾಪನ ವಿ
ಷಯವು ಕಾಮಿಕಾಗಮದಲ್ಲಿ ವಿಶೇಷವಾಗಿ ಹೇಳಿರುವುದರಿಂದ ಅಲ್ಲಿ ನೋ
ಡತಕ್ಕದ್ದು. ಗ್ರಂಥ ವಿಸ್ತಾರಭಯದಿಂದ ಇಲ್ಲಿ ಬರೆಯಲಿಲ್ಲ.

ಶಂಕುಸ್ಥಾಪನ ಮಂತ್ರವು.

ಶ್ಲೋ॥ ಮಹಾಮೇರುಗಿರಿಸ್ಸರ್ವದೇವಾನಾಮಾಲಯೋಯಥಾ। ತಥಾ
ಬ್ರಹ್ಮಾದಿದೇವಾನಾಮಮಗೇಹೇಸ್ಥಿತಿರ್ಭವೇತ್ । ಏವಂಪ್ರಾರ್ಥ
ಯದೇವೇಶಂಸ್ಥಾಪಯೇತ್ಕಿಂಚಿದುನ್ನತಂ ॥ ವಾಸ್ತುದೇವನಮಸ್ತೆ
ಸ್ತುಭೂಶಯಾಭಿರತಪ್ರಭೋಮದ್ಗೃಹೇ ಧನಧಾನ್ಯಾದಿ ಸಮೃದ್ಧಿಂ
ಕುರುಸರ್ವದಾ ॥

ಟೀ॥ ಸಮಸ್ತ ದೇವತೆಗಳಿಗೂ ಮೇರುಪರ್ವತವು ಹ್ಯಾಗೆ ನಿವಾಸಸ್ಥಾ
ನವಾಗಿದೆಯೋ ಬ್ರಹ್ಮಾದಿ ಸರ್ವದೇವತೆಗಳಿಗೂ ನನ್ನ ಮನೆಯು ಸ್ಥಾನ
ವಾಗಿರಲಿ ಎಂದು ಪ್ರಾರ್ಥನೆಮಾಡಿ ಶಂಕುವನ್ನು ಸ್ವಲ್ಪಮೇಲಾಗಿ ಸ್ಥಾ
ಪಿಸಿ ಭೂಮಿಯೇ ಹಾಸಿಗೆಯಾಗಿ ವುಳ್ಳ ಎಲೈ ವಾಸ್ತುಪುರುಷನೇ ! ನಿನ
ಗೆ ನಮಸ್ಕರಿಸುವೆನು. ನನ್ನ ಮನೆಯಲ್ಲಿ ಸರ್ವದಾ ಧನಧಾನ್ಯ ಸಮೃ
ದ್ಧಿಯನ್ನುಂಟುಮಾಡು. ಎಂದು ಸರ್ವದಾ ವಾಸ್ತು ಪುರಷನನ್ನು ಧ್ಯಾ
ನಿಸಬೇಕು.

ಶ್ಲೋ ॥ ಸಂಪ್ರಾರ್ಥ್ಯ ಸ್ಥಾಪಯೇದ್ಗೇಹೆ ಶಂಕುಂವೈ ಭಿತ್ತಿಮ
ಧ್ಯಮೆ । ಯದ್ದಿಙ್ಮುಖೋವಾಸ್ತುಪುರುಷಸ್ತನ್ಯಾಮೇವಚಲಕ್ರಿಯಂ ॥

ಟೀ॥ ಈ ಪ್ರಕಾರ ಧ್ಯಾನವಂ ಮಾಡಿ ಮನೆಯಗೋಡೆಯ ಮಧ್ಯದಲ್ಲಿ
ಶಂಕುವಂ ನಿಲ್ಲಿಸತಕ್ಕದ್ದು. ವಾಸ್ತು ಪುರುಷನು ಯಾವ ದಿಕ್ಕಿಗಭಿಮು

ಖವಾಗಿರುವನೋ ಅದೇ ದಿಙ್ಮುಖವಾಗಿ ಮನೆಯನ್ನು ಕಟ್ಟಿದರೆ ಒಳ್ಳೇ ದಾಗಿರುವುದು.

ಶ್ಲೋಕ ॥ ಕೃತಿಸ್ನೇಚಯುಸ್ಥಾಣೇಯುದ್ವಾವಕ್ಷಿಸಮಾಹರೇತ್ । ತ ಸ್ಮಿನ್ನಾಶೋಭವೇತ್ಕ್ಷಿಪ್ರಂಗೌತಮಸ್ಯವಚೋಯಥಾ ॥

ಟೀ॥ ಈ ಪ್ರಕಾರ ಸ್ಥಾಪಿಸಲ್ಪಟ್ಟ ಶಂಕುವಿನ ಮೇಲಾಗಲೀ ಸ್ಥಂಭದ ಮೇಲಾಗಲೀ ಪಕ್ಷಿಗಳು ಕುಳಿತುಕೊಂಡರೂ, ಆದರ ಆ ಕೃತಿಯು ಚಲಿಸಿ ದರೂ ಗೃಹಕರ್ತನಿಗೆ ನಾಶನ ವುಂಟಾಗುವುದೆಂದು ಗೌತಮರಿಂದ ಹೇಳ ಲ್ಪಟ್ಟದೆ.

ಶ್ಲೋ॥ ಕೃತಿಭಿನ್ನೇಚಯುಸ್ಥಾಣೆ ಛೇಪನೇ ಭೇದನೇತಥಾ।ಮೆಧೀತೇ ಜೋಧೃತೇವಾಪಿ ಸ್ಥಾನಭ್ರಷ್ಟೋಪಿಜಾಯತೆ ॥

ಟೀ॥ ಶಂಕುವಿನ ಅಥವಾ ಸ್ತಂಭಗಳ ಅಕೃತಿಯು ಬದಲಾಯಿಸಿದರೂ ಭಿನ್ನಮಾಡಿದರೂ, ಛೇದಿಸಿಡರೂ,ಆಯುಧಗಳಿಂದ ತೂತು ಮೊದಲಾದದ್ದು ಕೊರೆದರೂ, ಮೇಲಕ್ಕೆ ಯೆತ್ತಿದರೂ ಆ ಮನೆಯು ಯಜಮಾನನಿಗೆ ನಾಶ ವುಂಟಾಗುವುದು.

ಶ್ಲೋ॥ ಭೇದನೆಛೇದನಂಯಾತಿಭೇದನೆಬಂಧುಭೇದನಂ । ವೇದನೇ ಭಯಮುಗ್ರಂಚಚಲಿತೇಚಾರ್ಥನಾಶನಂ । ಕಲಹಂಚೋಧೃತೇನಿ ತ್ಯಂಭ್ರಸ್ಯತೇಧ್ವಂಶನೇತಥಾ । ಏತತ್ಸರ್ವಂನಕುರ್ವೀತ ಭರ್ತುಶ್ಶುಭ ಮಪೇಕ್ಷಿತಾ ॥

ಟೀ॥ ಶಂಕುವಾಗಲಿ ಸ್ತಂಭವಾಗಲೀ ಛೇದನೆ ಮಾಡಲ್ಪಟ್ಟರೆ ಕರ್ತೃವಿಗೆ ಭೇದನ ಉಂಟಾಗುವುದು, ಭೇದಿಸಿದರೆ ಬಂಧುಗಳಿಂದ ಬಿಡಲ್ಪಡುವನು. ತೂತು ಕೊರೆದದ್ದಾರೆ ಉಗ್ರವಾದ ಭಯವುಂಟಾಗುವುದು, ಕದಲಿಸಲ್ಪಟ್ಟ ರೆ ದ್ರವ್ಯನಾಶವಾಗುವುದು, ಆದ್ದರಿಂದ ಯಜಮಾನನಿಗೆ ಸೌಖ್ಯವಂ ಕೋ ರುವವನು ಈ ಕೆಲಸಗಳು ಮಾಡಕೂಡದು.

ಶಂಕುವು, ಅಥವಾ ಸ್ತಂಭಕ್ಕೆ ಸ್ಥಳವು.

ಶ್ಲೋ॥ ನವಭಾಗಂಗೃಹಕ್ಷೇತ್ರಂ ಕುರ್ಯಾನ್ಮಧ್ಯತ್ರಯೇಪುನಃ । ಭಾ ಗೆಪ್ವಯುಮಧೋಭಾಗೇ । ಶೇಷಂನಾಭಿಃಪ್ರಕೀರ್ತಿತಾ ॥

ಟೀಕು ॥ ಮನೆಯ ಕ್ಷೇತ್ರನನ್ನು ಒಂಭತ್ತು ಭಾಗಮಾಡಿ ಶಿರಸ್ಸಿನಿಂದ ಮೂರು ಭಾಗಗೆಳನು , ಮಧ್ಯಭಾಗದಲ್ಲಿನ ಮೂರು ಭಾಗಗಳಲ್ಲಿ ಶಿರಸ್ಸಿ

ನಕಡೆ ಒಂದು ಭಾಗವು ಬಿಟ್ಟು ಅಂವರೆ ನಾಲ್ಕು ಭಾಗ ಬಿಟ್ಟು ೫ ೬ನೇ ಭಾಗದಲ್ಲಿ ಶಂಕುವನ್ನಾಗಲಿ ಸ್ತಂಭವನ್ನಾಗಲಿ ಸ್ಥಾಪಿಸಬೇಕು, ಕೆಳಗೆ ಮೂರು ಭಾಗಗಳು ಬಿಟ್ಟುಬಿಡತಕ್ಕದ್ದು. ಮತ್ತು ಮತಾಂತರದಲ್ಲಿ ೨೮ ಭಾಗಮಾಡಿ ನಾಭಿಯ ಭಾಗದಲ್ಲಿ ಶಂಕುವನ್ನು ನಿಲ್ಲಿಸಬೇಕೆಂದಿರುತ್ತೆ, ಹ್ಯಾಗೆಂದರೆ-ಮುಹೂರ್ತ ಮಾರ್ತಾಂಡ, ಶ್ಲೋ॥ ಆಗ್ನೇಯಾದಿ ಪೃಥಂ ಪ್ರದಕ್ಷಿಣಗತಂಸೂತ್ರಂಸಮಾಸಾದಯೇನ್ಮಧ್ಯೇಪಾದುಕಪಾರ್ಶ್ವಸುಪ್ತ ಪುರುಷಂ ಧ್ಯಾತ್ವಾಮುತ್ತಾನಕಂಅಷ್ಟಾಟ್ಶ್ವಂಶಮಗೇಂದು ಸಮ್ಮಿತಲವಾನ್ ಪುಷ್ಟಾದ್ವಿಹಾಯಾಗ್ರ ಗೋನಾಭರಿತಃ ಖನೇಲ್ಲವಮಿತಂಪಾಮುಶ್ವಭಿಃಪೂರಯೇತ್ ॥

ಟೀ॥ ಕ್ಷೇತ್ರಪ್ರಮಾಣವನ್ನು ಹೆಂಟಿಗೊದ್ದನ ರೂಪವಾದ ವಾಸ್ತುಪುರುಷನನ್ನಾಗಿ ಭಾವಿಸಿ ಅದರ ೨೮ ಭಾಗಮಾಗಿ ಬಾಲದಿಂದ ೧೭ ಭಾಗಗಳ ಕಳೆದು ಅದರಮೇಲಿನ ಭಾಗವಂ ನಾಭಿಯನ್ನಾಗಿ ತಿಳಿದು ಅದರ ಎಡಗಡೆಯಲ್ಲಿ ಅಗೆದು ಶಂಕುವನ್ನು ಸ್ಥಾಪಿಸಬೇಕು ವಾಸ್ತು ಪುರುಷನ ಶಿರಸ್ಸುಮೊದಲಾದ ಅಂಗಗಳಲ್ಲಿ—ಅಗೆಯಕೂಡದೆಂದು ಶಿಲ್ಪಶಾಸ್ತ್ರಗಳಲ್ಲಿ ಹೇಳುತ್ತಾನೆ.

ಶ್ಲೋಕ॥ ವಾಸ್ತೋಶ್ಶಿರಸಿಪುಚ್ಛೇಚಯಾಮ್ಯಕಕ್ಷಾಚಪೃಷ್ಠತಃ । ಅ ಯಃಕಾಮಃ ಖನೇನ್ನೈವವಾಮಕುಕ್ಷಾ ನಿಶ್ಯುಭಾ ॥ ವಾಸ್ತುಕ್ಷೇತ್ರ ಪ್ರಮಾಣಂಚ ಕಲ್ಪಯಿತ್ವಾಸ್ಯವಾಮಕೆ । ಕುಕ್ಷಾ ತಂವಿಧಾಯಾದಾಗ್ರಾವಭಿಃಪೂರಯೇತ್ತತಃ ಲಲ್ಲನು ಹೇಳಿರುವುದೇನೆಂದರೆ॥ (ತ್ಯಜೇದ್ವಶಶಿರೋಭಾಗೇಹ್ಯಗ್ರೇಸಪ್ತದಶಾಂಶಕಾನ್ ಮಧ್ಯೆನಾಭಿಂವಿಜಾನೀಯಾತ್ ತತಶ್ಶಂಕುಂಪ್ರತಿಷ್ಠಯೇತ್) ಎಂದು ಹೇಳಿರುವದರಿಂದ ನಾಭಿಭಾಗದಲ್ಲಿಯೇ ಶಂಕುವನ್ನು ಸ್ಥಾಪಿಸಬೇಕು ಇದೇ ಅರ್ಥವನ್ನೇ ಕಾಮಿಕಾಗಮದಲ್ಲಿ ಹೇಳಲ್ಪಟ್ಟದೆ. (ಬಹ್ಮಸ್ಥಾನಸ್ಯನೈರುತ್ಯಾಂಶಂಕುಸ್ಥಾನಂ ಪ್ರಕಲ್ಪಯೇತ್। ಅನ್ಯತ್ರ ಸ್ಥಾಪಿತಂ ಶಂಕುಂಗ್ರಾಮಾದೀನ್ನಾಶಯಿಷ್ಯತಿ ೯ ಭಾಗಗಳಾದರೂ ೨೮ ಭಾಗಗಳಾದರೂ ವಾಸ್ತುಪುರುಷನ ನಾಭಿಭಾಗವೊಂದೇ ಆಗಿರುತ್ತೆಂದು ತಿಳಿಯತಕ್ಕದ್ದು.

ನ ವ ಭಾ ಗ ಗ ಳ ಫ ಲ.

ಶ್ಲೋ॥ ವಾಸ್ತುಪುತ್ರೋಪುಂಸಶ್ಶಿರಷ್ಠಂದ್ರಃಸುರ್ಯೋಭಾಗೇದ್ವಿಕೇಸ್ಥಿತಃತೃತೀಯಭಾಗೇಭೂಬುಧೊಭಾಗೆಚತುರ್ಥಕೆಗುರುರ್ಮುಖ್ಯೆಪಂಚಮೇತುಶುಕ್ರಷ್ಷಷ್ಠೇಧನಪ್ರದೆನಾಶನಂಸಪ್ತಮೇಸೌರಿರಷ್ಟಮೆರಾಹುಪೀಡಸನಂನವಮಂಕೇತುಶೋಕಂಚನವಭಾಗೆಗ್ರಹೈಃಫಲಂ ॥ ನೋ॥ಮೋ॥

ನಾಶಂರವಿರ್ಮೃತ್ಯುರ್ಭೌಮೋದಾಹಂಬುಧಶ್ಶುಭಂಗುರುರ್ಮುಖ್ಯಂಕ
ವಿರ್ಭಾಗ್ಯಂಶನೌಪೀಡನಚಾರ್ಯ ಕೇ(ರಾಹುರ್ಮೃತ್ಯುಂಕೇತುರೋಗಂ
ನವಭಾಗೇಫಲಂಸ್ಮೃತಂ ||

ಟೀ|| ವಾಸ್ತು ಪುರುಷನ ಶಿರಸ್ಸಾದ ಪ್ರಥಮಭಾಗತ್ರಯದಲ್ಲಿ ಮೊದ
ಲನೇ ಭಾಗದಲ್ಲಿ ಚಂದ್ರನಿರುವುದರಿಂದ ನಾಶವನ್ನು, ಸೂರ್ಯನುಮೃತ್ಯುವ
ನ್ನು ಅಂಗಾರಕನು ಅಗ್ನಿಭಯವನ್ನು ವಕ್ಷೋಭಾಗವಾದ—೫—೬ ಭಾ
ಗಗಳಲ್ಲಿ ಬುಧನು ಶುಭವನ್ನು ಗುರುವು ಮುಖ್ಯವನ್ನು, ಶುಕ್ರನು ಭಾಗ್ಯ
ವನ್ನು, ಪುಚ್ಛಭಾಗವಾದ ೭—೮—೯ ಭಾಗಗಳಲ್ಲಿ ಶನಿಯು ಪೀಡೆಯನ್ನು
ಚೌರ್ಯವನ್ನು ರಾಹುವು ಮೃತ್ಯುವನ್ನು, ಕೇತುವು ರೋಗವನ್ನು ಉಂಟು
ಮಾಡುವನು. ಆದುದರಿಂದ ಕುಕ್ಷಿಭಾಗವಾದ ಬುಧ, ಗುರು ಶುಕ್ರರುಗಳ
ಭಾಗಗಳಲ್ಲಿ ಮುಖ್ಯವಾಗಿ ನಾಭಿ ಭಾಗದಲ್ಲಿ ಶಂಕುವನ್ನಾಗಲಿ ಸ್ತಂಭವ
ನ್ನಾಗಲಿ ಪ್ರತಿಷ್ಠಿಸಬೇಕು.

ಶ್ಲೋ|| ಪಿತುರ್ವಿನಾಶಶ್ಶಿರಸಿಪ್ರಘಾತೆ ಶ್ರಿಯಃಕ್ಷಯಃಪಾದತಲಪ್ರದೆ
ಘಾತೆ | ಖಾತೇತುಪೃಷ್ಠೇಭಯರೋಗಪೀಡಾ ಸ್ತ್ರೀಪುತ್ರಲಾಭಂಧನ
ಮೇವಕುಕ್ಷೌ ||

ಟೀ|| ವಾಸ್ತುಪುರುಷನ ಶಿರೋಭಾಗದಲ್ಲಿ ಅಗೆದರೆ ತಂದೆ ತಾಯಿಗಳ
ನಾಶನವೂ ಪಾದಪ್ರದೇಶದಲ್ಲಿ ಅಗೆದರೆ ಸಂಪತ್ತು ನಾಶನವೂ ಬೆನ್ನಿನಮಲೆ
ಅಗಿದರೆ ಭಯವೂ, ರೋಗವೂ, ಪೀಡೆಯೂ, ಕುಕ್ಷಿಭಾಗದಲ್ಲಿ ಅಗೆದರೆ ಸ್ತ್ರೀ
ವೃದ್ಧಿಯೂ, ಪುತ್ರಾಧಿಕ್ಯವೂ, ಧನಪ್ರಾಪ್ತಿಯುಂಟಾಗುವುಗು.

ಶಂಕುಸ್ಥಾಪನೆಗೆ ಸಲ್ಲದ ಸಮಯ.

ಶ್ಲೋ|| ವೃದ್ಧೌಕ್ಷಯೇವ್ಯಾಧಿಯೆ ರಾಜಾತಂಕೆರಜಸ್ವಲೆ | ಚಾರೇ
ಕ್ರೂರೇದುರ್ಮುಹೂರ್ತೇ ಶ್ರಾದ್ಧೇಮಾಸಾಂತಿಕೆತಥಾ | ತಸ್ಮಿನ್‌ಶಂ
ಕುಂವಿನಿಕ್ಷಿಪ್ಯ ಮೃತ್ಯುಹಾನಿಪದಂಲಭೇತ್ ||

ಟೀ|| ಜಾತಾಶೌಚ, ಮೃತಾಶೌಚ, ರೋಗಭಯ, ರಾಜಾಟಂಕ, ಗೃಹಪ
ತಿಯ ಭಾರ್ಯೆಯು ರಜಸ್ವಲೆಯಾಗುನಿಕೆ, ಪಾಪಗ್ರಹಗಳಚಾರ, ದುಷ್ಟ
ಮುಹೂರ್ತ, ಶ್ರಾದ್ಧ, ತಿಂಗಳಿನ ಕೊನೆ ಈ ಸಮಯದಲ್ಲಿ ಶಂಕುಸ್ಥಾ
ಪನವಾಗಲಿ, ಸ್ತಂಭ ಪ್ರತಿಷ್ಠೆಯಾಗಲಿ, ಮಾಡಿದ್ದಾದರೆ ಮರಣವಾಗಲಿ,
ಹಾನಿಯನ್ನಾಗಲಿ, ಹೊಂದುವುದು. ಮತ್ತು ಕಾಮಿಕಾಗಮದಲ್ಲಿ, (ತಿಥಿ

ನಕ್ಷತ್ರಮಾಸಾಬ್ದಾಯನಾಂತಂಚವರ್ಜಯೇತ್) ಎಂದು ಹೇಳಿರುವುದರಿಂದ ತಿಥಿ, ನಕ್ಷತ್ರ ತಿಂಗಳು, ಸಂವತ್ಸರ, ಅಯನ ಇವುಗಳ ಕೊನೆಯಲ್ಲಿಯೂ, ಶಂಕುವನ್ನು ಸ್ಥಾಪಿಸಬಾರದು. ಸ್ಥಿರವಾಸ್ತು ಲಕ್ಷಣ.

ಶ್ಲೋ॥ ವಾಸ್ತುಮಸ್ತಕಮೀಶಾಸ್ಯಂಪದೌನೈರುತಿಮಂಡಲಂ । ಬಾಹೂಕೂರ್ಪರಮಿತ್ಯುಕ್ತವನಿಲಾನಲ ಕೋಣಯೋಃ ॥

ಟೀ॥ ಮನೆಗೆ ಸೇರಿದ ಸ್ಥಳವೆಲ್ಲವೂ ಸ್ಥಿರವಾಸ್ತುವೆನಿಸಿಕೊಂಬುವುದು ಆ ವಾಸ್ತುಪುರುಷನ ಶಿರಸ್ಸು ಈಶಾನ್ಯ ದಿಕ್ಕಿನಲ್ಲಿರುವುದು, ಪಾದಗಳು ನಿರುರುತಿದಿಕ್ಕಿನಲ್ಲಿರುವುವು ಬಲಕೈ ವಾಯುವ್ಯ ಮೂಲೆಯಲ್ಲಿಯೂ ಎಡಗೈ ಅಗ್ನಿಮೂಲೆಯಲ್ಲಿಯೂ ಇರುವುದು, ದೂಲಗಳು ಮೊದಲಾದ ಭಾರವಾದ ಮರಗಳು ಹಾಕಬೇಕಾದರೆ ವಾಸ್ತುಪುರುಷನ ಶಿರಸ್ಸಿನಕಡೆ ಮರಗಳ ಕೊನೆಗಳನ್ನು ಹಾಕಬೇಕು, ಬುಡಗಳನ್ನು ಹಾಕಬಾರದು.

ನಿ ತ್ಯ ವಾ ಸ್ತು ಲ ಕ್ಷ ಣ.

ಶ್ಲೋ॥ ನಿತ್ಯವಾಸ್ತು ಪ್ರವಕ್ಷ್ಯಾಮಿಪ್ರೋಕ್ತಂಮುನಿಮತಂಪರಂ ॥
ಪ್ರಥಮೇಚೋತ್ತರೆ ಶೀರ್ಷಂ ಮಧ್ಯಾಹ್ನೆ ಪೂರ್ವಕಂ ॥
ದಕ್ಷಿಣೆತ್ವಪರಾಹ್ಣೆಚ ಸಂಧ್ಯಾಯಾಂ ಪಶ್ಚಿಮೆ ಶಿರಃ । ನಿತ್ಯವಾಸ್ತು
ಪ್ರಮಾಣಂಚ ವಾಸ್ತು ಶಾಸ್ತ್ರ ವಿಶಾರದೈಃ ॥

ಟೀ॥ ವಾಸ್ತುವಿದ್ಯಾವಂತರಿಂದ ಹೇಳಲ್ಪಟ್ಟ ಸನತ್ಕುಮಾರ ಯೋಗೀಂದ್ರರಿಗೆ ಇಷ್ಟವಾಗಿರುವಂಥಾ ನಿತ್ಯವಾಸ್ತು ಪ್ರಕಾರವನ್ನು ತಿಳಿಸುವೆನು. ಮೊದಲನೇ ಝಾಮದಲ್ಲಿ ಉತ್ತರ ಶಿರಸ್ಸಾಗಿಯೂ ಮೂರನೇ ಜಾವದಲ್ಲಿ ದಕ್ಷಿಣ ಶಿರಸ್ಸಾಗಿಯೂ, ಸಾಯಂಕಾಲದಲ್ಲಿ ಪಶ್ಚಿಮ ಶಿರಸ್ಸಾಗಿಯೂ ಇರತಕ್ಕದ್ದು ನಿತ್ಯವಾಸ್ತುವೆಂದು ಹೇಳುವರು.

ಶ್ಲೋ॥ ಚರವಾಸ್ತುಶುಭಂಪ್ರೋಕ್ತಂ ಮಧ್ಯಮಂ ನಿತ್ಯವಾಸ್ತುಕಂ॥
ಅಧಮಂಸ್ಥಿರವಾಸ್ತುಸ್ಯಾ ವಾಸ್ತುದೇವಾಃಪ್ರತಿಷ್ಠಿತಾಃ।ದೇವಾಗಾರೇಗೃಹಾರಂಭೇದೇಪ್ರಾಸಾದಮಂಟಪೇ।ಚರವಾಸ್ತುಪ್ರಕಾರೇಣಶಂಕುಂಸ್ತಂಭಪ್ರತಿಷ್ಠಯೇತ್ ॥

ಟೀ॥ ಚರವಾಸ್ತುವು ಶುಭಕರವಾಗಿಯೂ ನಿತ್ಯವಾಸ್ತುವು ಮಧ್ಯಮವಾಗಿಯೂ, ಸ್ಥಿರವಾಸ್ತು ಅಧಮವಾಗಿಯೂ ಇರುವುವು, ದೇವಸ್ಥಾನ ಗೃಹಪ್ರಾರಂಭ ಕೋಟೆಅರಮನೆ, ಮಂಟಪ ಇವುಗಳಲ್ಲಿ ಚರವಾಸ್ತು ಪ್ರಕಾ

ರ ಶಂಕುಸ್ತಂಭ ಪ್ರತಿಷ್ಠೆಮಾಡಬೇಕು ಅಥವಾ ನಿತ್ಯವಾಸ್ತುಪ್ರಕಾರವಾದರೂ ಮಾಡಬಹುದು. ಭಾವಿಗಳು ಕೆರೆ, ನಿಕ್ಷೇಪ, ಮನೆ, ದೇವಾಲಯಗಳು, ಮುಗಿದ ತರುವಾಯವೂ ಸ್ಥಿರವಾಸ್ತುವನ್ನು ಆರಂಭಿಸಬಹುದು.

### ಸೂತ್ರ ಹಿಡಿಯ ತಕ್ಕ ಲಕ್ಷಣ.

ಶ್ಲೋ॥ ಆಗ್ನೇಯ್ಯಾಂಚಾಪಿ ನೈರುತ್ಯಾಂ ವಾಯವ್ಯೈಶಾನಕ್ಯೈಕ್ರಮಾತ್ । ಸೂತ್ರ ಪ್ರಸಾರಿತಂ ಕುರ್ಯಾಚ್ಛಿಲೋತ್ತರ್ಷ ಮಾನತಃ ॥

ಟೀ॥ ಗೃಹಕ್ಕೆ ಸೂತ್ರನಂ ಹಿಡಿಯಬೇಕಾದರೆ ಆಜ್ಞೇಯ ದಿಕ್ಕಿನಿಂದ ನೈರುತ್ಯ ಮೂಲೆಯವರೆಗೂ ವಾಯುವ್ಯಮೂಲೆಯಿಂದ ಯಿಾಶಾನ್ಯ ಮೂಲೆಯವರೆಗೂ ಪ್ರದಕ್ಷಿಣ ಕ್ರಮವಾಗಿ ಹಿಡಿಯತಕ್ಕದ್ದು, ಬ್ರಹ್ಮ ಶಂಭುವು.

ಶ್ಲೋ॥ ಸೂತ್ರಭಿತ್ತಿ ಶಿಲಾನ್ಯಾಸಂ ಸ್ತಂಭಸ್ಯಾರೋಪಣಂ ತಥಾ ।
ಪೂರ್ವದಕ್ಷಿಣಯೋರ್ಮಧ್ಯೆ ಕುರ್ಯಾದಿತ್ಯಾಹಕಾಶ್ಯಪಃ ॥

ಎಂದು ಹೇಳಿರುವುದರಿಂದ ಸೂತ್ರನ್ಯಾಸವೂ ಗೋಡೆ ಹಾಕೋಣವೂ ಶಿಲಾನ್ಯಾಸವೂ ಸ್ತಂಭಪ್ರತಿಷ್ಠೆಯೂ ಶಂಕುಸ್ಥಾಪನವೂ ಇವುಗಳು ಆಗ್ನೇಯ ಮೂಲೆಯಿಂದಲೇ ಪ್ರಾರಂಭಿಸಬೇಕು. ಈ ಸೂತ್ರನ್ಯಾಸ ಮಾಡಿದನಂತರ ಸೂತ್ರವನ್ನನುಸರಿಸಿ ರೇಖೆಯನ್ನು ಎಳೆಯಬೇಕು. ಬ್ರಾಹ್ಮಣನಾದ ಪಕ್ಷ ಚಿನ್ನದಿಂದಲಾದರೂ ಹೆಬ್ಬೆಟ್ಟಿನಿಂದಲಾದರೂ ತರ್ಜನೀಬೆರಳಿನಿಂದಲಾದರೂ ನಡುಬೆರಳಿನಿಂದಲಾದರೂ ಶಿರಸ್ಸನ್ನು ಮುಟ್ಟಿ ಗೆರೆ ಎಳೆಯಬೇಕು ಕ್ಷತ್ರಿಯನು—ಎದೆಯನ್ನು—ವೈಶ್ಯನು—ತೊಡೆಗಳನ್ನು—ಶೂದ್ರನು—ಪಾದಗಳನ್ನು ಮುಟ್ಟಿಕೊಂಡು ಎಡಗೈಯಿಂದ ರೇಖೆಯನ್ನು ಮಾಡಬೇಕು. ಲೋಹಕಾಷ್ಟವು ಮೊದಲಾದುದರಿಂದ ಗೆರೆ ಮಾಡಬಾರದು. ಹೀಗೆಂದು ಭೃಗುವು ಹೇಳುತ್ತಾರೆ.

ಶ್ಲೋ॥ ವಿಪ್ರಶ್ಶೀರ್ಷಂನೃಪೋವಕ್ಷೋವೈಶ್ಯತೋರೂಪರಃಪದೌ ॥
ಸ್ಪೃಷ್ಟ್ವಾರೇಖಾಂ ಗೃಹಾರಂಭೆಕುರ್ಯಾದಗ್ನೇಃಪ್ರದಕ್ಷಿಣಂ ॥

ಕಾರಿಕೆಯಲ್ಲಿ) ಅಂಗುಷ್ಟಕೇನದೇಶಿನ್ಯಾರೇಖಾಂಕುರ್ವೀತಸೂತ್ರತಃ । ಸ್ವರ್ಣೇನಮಣಿನಾರೂಪ್ಯಮುಕ್ತಾದಧಿಫಲಾಕ್ಷತೈಃ । ಕುಸುಮೈರ್ವಾನಶಸ್ತ್ರೇಣನಲೋಹೇನನಭಸ್ಮನಾ।ಕಾಷ್ಟಾದಿಭಿರ್ನಾಪನವ್ಯಾಂ ನವಕ್ರಾಂದೋಷದರ್ಶನಾತ್ ॥ ಇದರ ಫಲ ಬೃಹದ್ವಾಸ್ತು ಪದ್ಧತಿಯಲ್ಲಿ ಹೇಳಿದೆ,

ಶ್ಲೋ॥ ಶಸ್ತ್ರೇಣಶಸ್ತ್ರಮೃತ್ಯುರ್ಬಂಧೀಲೋಹೇನಭಸ್ಮನಾಗ್ನಿಭಯಂ।

ತಸ್ಕರಭಯಂತೃಣೇನಚಲಿಖಿತಾಕಾಷ್ಟೇನರಾಜಭಯಂ| ವಕ್ರಾಃಚಪಾ
ಲಿಖಿತಾಶತ್ರುಭಯದಾಕ್ಲೇಶದಾವಿರೂಪಾಚ | ಚರ್ಮಾಗಾರಾಸ್ಥಿಕೃ
ತಾಂದಂತೇನಚಕರ್ತುರಶುಭಾಯ | ವೈರವಪಸವ್ಯಲಿಖಿತಾಪ್ರದಕ್ಷಿ
ಣಾಸಂಪದೋವಿನಿರ್ದಿಶ್ಯಾಃ ||

ಟೀ|| ಈ ಪ್ರಕಾರ ಹೇಳಿರುವುದರಿಂದ ಸ್ವರ್ಣ, ಬೆಳ್ಳಿ, ರತ್ನ, ಮುತ್ತು, ಮೊಸರು, ಫಲ, ಅಕ್ಷತೆ, ಹುವ್ವು, ಇಂಥಾ ಶುಭಕರ ದ್ರವ್ಯಗಳ ಬಿಟ್ಟು ಶಸ್ತ್ರದಿಂದ ಮಾಡಿದರೆ ಆಯುಧ ಮರಣವು, ಲೋಹದಿಂದ ಬಂಧನಪ್ರಾಪ್ತಿಯೂ ಬೂದಿಯಿಂದ ಅಗ್ನಿಭಯವೂ ಹುಲ್ಲಿನಿಂದಾ ಚೋರಭಯವೂ, ಕಟ್ಟಿಗೆಯಿಂದ ರಾಜಭೀತಿಯೂ, ಕಾಲಿನಿಂದ ಬರೆದರೆ ವಕ್ರವೂ ಚರ್ಮದಿಂದ ಶತ್ರುಭಯವೂ ಇದ್ದಲಿನಿಂದ ದುಃಖವೂ ಎಲುಬಿನಿಂದ ವಿರೂಪವೂ ದಂತದಿಂದ ಯಜಮಾನನಿಗೆ ಅಶುಭವೂ ಅಪಸವ್ಯದಿಂದ ವಿರೋಧವೂ, ಪ್ರದಕ್ಷಿಣದಿಂದ ಸಂಪತ್ತುಗಳೂ ಉಂಟಾಗುವವು.

## ಶಿ ಲಾ ನ್ಯಾ ಸ ವು.

ಈ ಪ್ರಕಾರ ಸೂತ್ರನ್ಯಾಸಮಾಡಿ ಅನಂತರ ಅದೇಪ್ರಕಾರವೇ ಆಗ್ನೇಯ ಮೂಲೆ ಪ್ರಾರಂಭಮಾಡಿಕೊಂಡು ಪ್ರದಕ್ಷಿಣಕ್ರಮವಾಗಿ ಗೋಡೆಯ ಕೆಳಗೆ ಕಲ್ಲುಗಳನ್ನು ಸ್ಥಾಪಿಸಬೇಕು ಶಿಲಾನ್ಯಾಸವು ಮಾಡುವಾಗ ಪೂಜೆಯಂ ಮಾಡಬೇಕು, ಹೀಗೆಂದು ವರಾಹನು, ಶ್ಲೋ || ದಕ್ಷಿಣ ಪೂರ್ವಕೋಣೆ ಕೃತ್ವಾಪೂಜಾಂಶಿಲಾನ್ಯಸೇತ್ಪ್ರಥಮಂ | ಶೇಷಾಃ ಪ್ರದಕ್ಷಿಣೇನಸ್ತಂಭಾಂಶ್ಚೈವಪ್ರತಿಷ್ಠಾಪ್ಯಾಃ | ಈ ಪ್ರಕಾರ ಶಿಲಾನ್ಯಾಸ ಮಾಡಿ ಅದರ ಮೇಲೆ ಸ್ತಂಭಗಳನ್ನು ಪ್ರತಿಷ್ಠೆಮಾಡಬೇಕು. ಸ್ತಂ ಭ ಪ್ರ ತಿ ಷ್ಠೆ

ವರಾಹನು- ಶ್ಲೋ || ಛತ್ರಸ್ರಗ್ಗಂಧಯುತಃ ಕೃತಧೂಪ ವಿಲೇಪನ
ಸ್ಸಮುಥ್ಥಾಪ್ಯಃ | ಸ್ತಂಭಸ್ಸ್ತಥೈವ ಕಾರ್ಯೋದ್ವಾರೋ ಭೂಯಃ
ಪ್ರಯತ್ನೇನ ||

ಟೀ|| ಸ್ತಂಭಪ್ರತಿಷ್ಠೆಗೆ ಯೋಗ್ಯವಾದ ಕಾಲದಲ್ಲಿ ಸ್ತಂಭದ ಮೇಲೆ ಕಾಗೆ ಗೂಗೆ ಮೊದಲಾದ ದುಷ್ಟಪಕ್ಷಿಗಳು ಕುಳಿತುಕೊಳ್ಳದಂತೆಮೇಲೆ ಛತ್ರವನ್ನು ಕಟ್ಟಿ ಪುಷ್ಪಮಾಲಿಕೆಗಳಿಂದ ಅಲಂಕರಿಸಿ ಗಂಧ ಅಕ್ಷತೆಗಳಿಂದ ಧೂಪ ಹಾಕಿ

ಮಂಗಳವಾದ್ಯಗಳೊಡನೆ ಸ್ತಂಭವನ್ನು ಯೆತ್ತಬೇಕು ಹೀಗೆ ದ್ವಾರಗೆ ಳನ್ನು ಯೆತ್ತಬೇಕು ಶ್ಲೋ॥ ಸ್ತಂಭೋಪರಿಯದೋಲೂಕಕಂಕಗೃಧ್ರಾದಿ ಪಕ್ಷಿಣಃ ವ್ಯಾಳಾದಯಶ್ಚತಿಷ್ಠಂತಿತದಾಕರ್ತುರ್ನಶೋಭನಂ ॥ ತಸ್ಮಾತ್ ಸ್ತಂಭೋಪರಿಚ್ಛತ್ರಂಶಾಖಾಂಫಲವತೀಂತುವಾ । ಧಾರಯೇದಧವಾವ ಸ್ತ್ರಂಬುಧ್ನೇ ರತ್ನಾದಿ ನಿಕ್ಷಿಪೇತ್ ॥

ತಾ॥ ಸ್ತಂಭದಮೇಲೆ ಕಾಕಾದಿಗಳು ಕುಳಿತುಕೊಂಡರೆ ಗೃಹಪತಿಗೆ ನಾಶ ವಾಗುವದರಿಂದ ಛತ್ರವಾಗಲೀ ಫಲಸಹಿತವಾದರಂಬೆಯಾಗಲೀ ವಸ್ತ್ರವಾ ಗಲಿ ಕಟ್ಟಿ ಕೆಳಗೆ ನವರತ್ನಗಳನ್ನು ಸ್ಥಾಪಿಸಬೇಕು. ಕೆಲವರು ಈಶಾನ್ಯದಲ್ಲಿ ಸ್ತಂಭಪ್ರತಿಷ್ಟೆಮಾಡುವರು, ಅದುಸರಿಯಲ್ಲ, ಆವಿಷಯವು ವಿವಾಹವೇದಿಕೆ ಯಲ್ಲಿ ಅಲಂಕಾರಾರ್ಥವಾಗಿ ಸ್ಥಾಪಿಸುವ ಸ್ತಂಭಗಳ ಸಂಬಂಧವಾಗಿರುವದು ಈ ಸಂಗತಿ ಮುಹೂರ್ತ ಮಾರ್ತಾಂಡದಲ್ಲಿ ವಿಸ್ತಾರವಾಗಿ ಹೇಳಲ್ಪಟ್ಟಿಧೆ. ನೋಡತಕ್ಕದ್ದು, ಗೃಹಸ್ತಂಭವನ್ನು ಆಗ್ನೇಯ ದಿಕ್ಕಿನಲ್ಲೇಪ್ರಾರಂಭಿಸಬೇಕು. (ಕಾತ್ಯಾಯನಗೃಹ್ಯಕಾರಿಕೆಯಲ್ಲಿ) ಶ್ಲೋ॥ ಏಕೈಕಮುಚ್ಛ್ರಯೆತ್‌ಸ್ತಂಭಂ ಮಂತ್ರೈರೇತ್ತೈಶ್ಶಿಲಾತಲೆ । ಶಿರೋವಸಾನಇತ್ಯೇತ್ತೈ ರ್ಮಂತ್ರೈಶ್ಚ ನಿಯ ಮಾದ್ಗೃಹೀ । ಆಗ್ನೆಯಾದಿಷುಕೋಣೇಷು ಮಂತ್ರೈರೇತ್ತೈಶ್ಶಿಲಾ ನ್ಯ ಸೇತ್ ॥ ಎಂಬದಾಗಿ ಹೇಳಿರುವದರಿಂದ ಆಗ್ನೇಯದಲ್ಲಿಯೇ ಸ್ತಂಭ ಪ್ರತಿಷ್ಠೆ ಮುಂತಾದ್ದು ಶಿರೋವಸಾನ ಎಂಬ ಮಂತ್ರದಿಂದ ಮಾಡಬೇಕು.

## ಸೂತ್ರ ಭಗ್ನವಾದರೆ ಫಲ.

ಶ್ಲೋ॥ ಸೂತ್ರಂಪ್ರಸಾರಿತಂವಾಪಿಶಂಕುರ್ವಾಭಜ್ಯತೆಯದಿ । ಹಲಂ ಚಭಗ್ನಮಾಯಾತಿ ತತ್ಫಲಂ ಕ್ರಮಶೋಬ್ರವೀತ್ ॥ ಪ್ರಥಮೆಪತಿನಾ ಶಶ್ಚದ್ವಿತೀಯೆಸ್ತ್ರೀವಿನಾಶನಂ । ತೃತೀಯೆ ಪುತ್ರನಾಶಂಚಚತುರ್ಥೆಧ ನನಾಶನಂ ॥

ಟೀ॥ ಮನೆಗೆ ಸೂತ್ರಹಿಡಿಯುವ ಕಾಲದಲ್ಲಿ ದಕ್ಷಿಣಕಡೆ ಸೂತ್ರವು ಕಿ ತ್ತುಹೋದರೂ ಆ ಕಡೆ ಶಂಕು ಮುರಿದರೂ ಗೃಹಪತಿಗೆ ನಾಶನವು, ಪಶ್ಚಿ ಮಕಡೆ ಸೂತ್ರ ಹೋದರೂ ಶಂಕು ಭಗ್ನವಾದರೂ ಯಜಮಾನನ ಹೆಂ ಡತಿಗೆ ನಾಶನವು ಉತ್ತರ ಕಡೆ ಸೂತ್ರವು ಛಿನ್ನವಾದರೂ ಶಂಕುಭಿ

ನ್ನವಾದರೂ ಪುತ್ರನಾಶನ ವುಂಟಾಗುವದು. ಮೂಡಲಕಡೆಯ ಸೂತ್ರವು ಹೋದರೂ ಶಂಕು ಛಿನ್ನವಾದರೂ ಧನನಾಶನವಾಗುವದು. ಹಾಗೆಯೇ ನೆಲವಂ ಉಳುವ ಕಾಲದಲ್ಲಿ ನೇಗಿಲು ಮುರಿದರೆ ಫಲವ ತಿಳಿಯತಕ್ಕದ್ದು.

ಬ್ರಾಹ್ಮಣಾದಿಗಳಿಗೆ ತಕ್ಕಸೂತ್ರಗಳು.

ಶ್ಲೋ॥ ದರ್ಭೋತ್ಥಂನಾರಿಕೇಳೋತ್ಥಂ ತಾಳಂಕಾರ್ಪಾಸಸಂಭವಂ।
ವಿಪ್ರಕ್ಷತ್ರಿಯವೈಶ್ಯಾನಾಂಶೂದ್ರಾಣಾಂಚ ಯಥಾಕ್ರಮಂ ॥

ಟೀ॥ ಬ್ರಾಹ್ಮಣರಿಗೆ ದರ್ಭೆಹುಲ್ಲಿನಿಂದ ಮಾಡಲ್ಪಟ್ಟ, ಸೂತ್ರವೂ, ವೈಶ್ಯರಿಗೆ ತಾಳೇನಾರಿನಿಂದ ಮಾಡಲ್ಪಟ್ಟಸೂತ್ರವೂ, ಕ್ಷತ್ರಿಯರಿಗೆ ತೆಂಗಿನ ನಾರಿನಿಂದ ಮಾಡಲ್ಪಟ್ಟ ಸೂತ್ರವೂ, ಶೂದ್ರರಿಗೆ ನೂಲಿನಹಗ್ಗವೂ, ಪ್ರಶಸ್ತಗಳೆಂದು ತಿಳಿಯತಕ್ಕದ್ದು.

ಅಕಸ್ಮಾತ್ತಾಗಿ ಶಂಕುಗಳು ಕದಲಿಸಲ್ಪಟ್ಟರೆ.

ಶ್ಲೋ ॥ ವಲ್ಮೀಕೋದರತಸ್ಕರೈಶ್ಚ ಖನನೈರುತ್ಪಾಟಿತೇಕೀಲಕೇ।
ತದ್ಗೇಹಂವಿಲಯಂಪ್ರಯಾತಿಚಪಲಂ ತೂಲಂಯಥಾವಾಯುನಾ।
ತಸ್ಮಾತ್ತದ್ಗೃಹವಾಸ್ತು ನಾಥಮುಚಲಂ ಯಸ್ಥಾಪಯೇತ್ಪೂರ್ವವ
ತ್ಕೃತ್ವಾವಾಸ್ತುಬಲಿಂ ಯಥೋಕ್ತವಿಧಿನಾಯಾತಸ್ವರುಕ್ಷಂವಿಧಾ॥

ಟೀ॥ ಶಂಖು ಸ್ಥಾಪಿಸಿದ ನಂತರ ಹುತ್ತ ಬೆಳೆದು ಅದರ ದೆಸೆಯಿಂದಲಾದರೂ ಕಳ್ಳರ ದೆಸೆಯಿಂದಲಾದರೂ, ಆ ಶಂಕುಕದಲಿದರೂ, ಆ ಮನೆಯು ನಾಶವಾಗುವದು. ಶಂಖುಸ್ಥಾಪಿಸಿದ ೨೭ ದಿನಗಳವಳಗಾಗಿ ದೂಲಗಳೆತ್ತದೆ ಮಾಳವತ್ತಹಾಕದೆ ಇದ್ದರೆ ಮೊದಲುಪ್ರತಿಷ್ಠಾ ನಕ್ಷತ್ರಕ್ಕೆ ಪುನಃ ಚಂದ್ರನು ಬರುವದರಿಂದ ದೋಷ ವುಂಟಾಗುವದರಿಂದ ಆ ಶಂಕುಗಳನ್ನು ಸ್ತಂಭಗಳನ್ನು ಕಿತ್ತು ಮರಳಿ ಪೂರ್ವದಂತೆ ಶುಭಸಮಯದಲ್ಲಿ ವಿಧಿಪ್ರಕಾರ ವಾಸ್ತುಬಲಿ ಮೊಂತಾದ್ದು ಮಾಡಿ ಶಂಕು ಪ್ರತಿಷ್ಠೆಮಾಡಿ ಮನೆಕಟ್ಟಬೇಕು, ಮತ್ತು ಶಂಕುಸ್ಥಾಪನೆ ಆದನಂತರ ಮಾಳವತ್ತಹಾಕುವದರೊಳಗಾಗಿ ವಾಸ್ತುಪುರುಷನ ಸ್ಥಿತಿಯು ಬದಲಾಯಿಸಿದರೆ ಮೇಲೆ ಹೇಳಿದಂತೆ ನೂತನವಾಗಿ ಸ್ಥಾಪನೆಮಾಡಬೇಕು. ಮೊದಲಿದ್ದ ಶಂಕುಗಳನ್ನ ಹಾಗೆಯೇ ಸರ್ವಥಾ ನಿಲ್ಲಿಸಬಾರದು.

ಶ್ಲೋ॥ ಸೂತ್ರಾನಾದ್ಯಕಾಲೀತುದೃಶ್ಯತೆವಾಂಪುರೋಗವಾಕ್।
ಸನ್ಯಾಸೀಕುಷ್ಟರೋಗೀಚ ಸತದ್ಗೇಹಂನಸೇತ್ಕ್ವಚಿತ್ ॥

ಟೀ|| ವರ್ಗಶುದ್ಧಿಯಾಗಿ ಸೂತ್ರವಂ ಹಿಡಿಯುವ ಕಾಲದಲ್ಲಿ ಪಾಂಡು ರೋಗಿಯಾಗಲಿ ದೊಡ್ಡ ರೋಗವುಳ್ಳವನಾಗಲಿ ಸನ್ಯಾಸಿಯಾಗಲಿ ನೋಡ ಲ್ಪಟ್ಟರೆ ಆ ಮನೆಯಲ್ಲಿ ಒಂದುದಿನವಾದರೂ ವಕ್ಕಲಿರಲಾರರು ಆದ್ದರಿಂದ ಇಂಥಾ ಅವಶಕುನಗಳುಂಟಾದರೆ ಆ ಕಾಲದಲ್ಲಿ ನಿಲ್ಲಿಸಿ ವಳ್ಳೇಸಮಯದ ಲ್ಲಿ ಮನೆಕಟ್ಟಬೇಕು ಮತ್ತು ಕಾಮಿಕಾಗಮದಲ್ಲಿ,

ಶ್ಲೋ || ಚರ್ಮಕೃನ್ಮುಕ್ತಕೇಶಾದಿ ರಣಕ್ಷುತ್ ಕ್ಷಾಮಮುಂಡಿನಾಂ |
ಮಲಿನಾಭಕ್ತನಗ್ನಾದೇರ್ದರ್ಶನಂ ದುಃಖದಂಭವೇತ್ || ಯೆಂದಿರುವ ದರಿಂದ ಚರ್ಮಕಾರನು, ಕೂದಲು ಬಿಚ್ಚಿಕೊಂಡಿರುವನು, ಧ್ವನಿಸಹಿತವಾಗಿ ಸೀನುತಿರುವನು, ಬೋಳ ತಲೆಯುವನು, ಕುಳ್ಳನು, ನಾಸ್ತಿಕನು, ಇವರ ದರ್ಶನ ಕೆಟ್ಟದ್ದು, ಈ ಮುಂತಾದ ಶಕುನಗಳು ಇಲ್ಲಿ ವಿಶೇಷವಾಗಿ ಹೇಳಿ ರುವದ್ದರಿಂದ ಅವೆಲ್ಲವೂ ಈ ಗ್ರಂಥದಲ್ಲಿ ಬರೆಯಲು ವಿಸ್ತಾರ ಭಯದಿಂದ ನಿಲ್ಲಿಸಲಾಯಿತು. ಅವೆಲ್ಲವೂ ಮುಖ್ಯವಾಗಿ ನೋಡತಕ್ಕವುಗಳೇ ?

## ಶ ಲ್ಯ ಪ ರಿ ಕ್ಷೆ.

ಸೂತ್ರಪ್ರಸಾರಣೇಕಾಲೇಲಂಘಯೇಚ್ಛ್ವಾವೃಷಃಖರಃ|| ನೈಋತ್ಯಾಂಪ ಶ್ಚಿಮೇವಾಯೌಕ್ರಮಾಚ್ಛಲ್ಯಂತದಂಗೇಜಂ | ಮಾರ್ಜಾರಲೋಲಂಘ್ಯ ತೇಸೂತ್ರಮಾಗ್ನೇಯ್ಯಾಂತುವಿನಿರ್ದಿಶೇತ್ | ಮಹಿಷೀಲಂಘ್ಯತೆಸೂ ತ್ರಮುತ್ತರೇಚಾಸ್ಥಿನಿರ್ದಿಶೇತ್ | ವಿಲಂಘ್ಯತೇಮನುಷ್ಯಸ್ತುವಿದ್ಯಾ ತ್ ಕ್ಷೇತ್ರಸ್ಯಮಧ್ಯಮೇ | ಭುಜಂತವೂವಿಲಂಘ್ಯಂತೆತೇಷಾಂಶಲ್ಯಾ ನಿನಿರ್ದಿಶೇತ್ ||

ಈ ಸೂತ್ರವಂ ಪಿಡಿಯುವಕಾಲದಲ್ಲಿ ಸೂತ್ರವಂನಾಯಿ ದಾಟಿದರೆ ನಿಋ ಋತಿ ಕೋಣೆಯಲ್ಲಿ ಆದರ ಎಲುವುಗಳಿರುವವು, ಎತ್ತುದಾಟಿದರೆ ಪಡವ ಲಕಡೆಯಲ್ಲಿ ಅದರ ಯೆಲುವುಗಳಿರುವವು, ಕತ್ತೆಯು ದಾಟಿದರೆ ವಾಯು ಕೋಣೆಯಲ್ಲಿ ಆದರ ಶಲ್ಯಗಳಿರುವವು, ಬೆಕ್ಕು ದಾಟಿದರೆ ಆಗ್ನೇಯದಲ್ಲಿ ಅದರ ಯೆಲುವುಗಳಿರುವವು,ಯಮ್ಮೆ ದಾಟಿದರೆ ಬಡಗಣ ದಿಕ್ಕಿನಲ್ಲಿ ಅದರ ಅಸ್ಥಿಗಳಿರುವವು, ಮನುಷ್ಯನು ದಾಟಿದರೆ ಆ ನಿವೇಶನದ ಮಧ್ಯ ಪ್ರದೇಶ ದಲ್ಲಿ ನರಶಲ್ಯಗಳಿರುವವು.

ಶ್ಲೋ|| ಯದಿಸೂತ್ರಂಲಂಘಯೇಯುರ್ಜಂ ತವಶ್ವನಕಾದಯಃ|
ಯಾದಿಶಂಯಾಂತಿತತ್ರಾಸ್ಥಿಸ್ಥಿತಮಿತ್ಯುಚ್ಯತೇಬುಧೈಃ ||

ಮತ್ತು ಯಾವ ಜಂತುವು ಯಾವ ದಿಕ್ಕಿನಿಂದ ಬಂದು ಯಾವ ದಿಕ್ಕಿಗೆ ದಾಟುತ್ತವೆಯೋ ಆದರ ಶಲ್ಯಗಳೇ ಅದೇ ಸ್ಥಳದಲ್ಲಿ ಇದೆಯೆಂದು ತಿಳಿಯತ ಕ್ಕದ್ದು. ಈ ವಿಷಯವಾಗಿ ಜ್ಯೋತಿರ್ನಿಬಂಧದಲ್ಲಿ ಹೇಳಿರುವದೇನಂದರೆ,

ಶ್ಲೋ॥ ಅಕಚಟತಪಯಶಹಷಯಾವರ್ಣಾಃ ಪೂರ್ವಾದಿಮಧ್ಯಾಂ ತ್ಯಾಃ । ಶಲ್ಯಕರಾಇಹನಾಸ್ತಿ ಶಲ್ಯಗೃಹೇನಿವಸತಾಂನಾಶಃ ॥ ಅಂದರೆ:- ಪೂರ್ವ ಪಶ್ಚಿಮವಾಗಿ ೪ ರೇಖೆಗಳು, ಉತ್ತರದಕ್ಷಿಣವಾಗಿ ೪ ರೇಖೆಗಳು ಹಾಕಲು ೯ ಮನೆಗಳು ಆಗುವವು, ಆ ಚಕ್ರದಲ್ಲಿ ಪೂರ್ವಾದಿಯಾಗಿ ಪ್ರದ ಕ್ಷಿಣವಾಗಿ ಅ-ಕ-ಚ-ಟ-ತ-ಪ-ಯ-ಶ ಈ ವರ್ಣಗಳಂ ಬರೆದು ಮಧ್ಯಕೋ ಷ್ಟದಲ್ಲಿ ಹಗಯ ಎಂಬೀ ಮೂರಕ್ಷರಗಳು ಬರೆದು ಪ್ರಶ್ನೆ ಮಾಡಿದ ಆದ್ಯಕ್ಷ ರವು ಮೇಲೆ ಹೇಳಿದ ವರ್ಗಗಳಲ್ಲಿ ಯಾವ ಅಕ್ಷರವಾಗುತ್ತದೆಯೋ ಆಯಕ್ಷ ರಕ್ಕೆ ಯಾವ ದಿಕ್ಕು ಹೇಳಲ್ಪಟ್ಟಿದೆಯೋ ಆ ದಿಕ್ಕಿನಲ್ಲಿ ಆಯಾಯ ಶಲ್ಯಗಳಿ ರುವದೆಂದು ತಿಳಿಯತಕ್ಕದ್ದು. ಹ್ಯಾಗೆಂದರೆ, ಪೂರ್ವದಿಕ್ಕಿನಲ್ಲಿ ಅಕಾರಾದಿ ಯಾಗಿ ೧೬ ಸ್ವರಗಳು ಆಗ್ನೇಯಕೋಣದಲ್ಲಿ ಕವರ್ಗವು, ದಕ್ಷಿಣದಲ್ಲಿ ಚವ ರ್ಗವು ನೈಋತ್ಯದಲ್ಲಿ ಟವರ್ಗವು, ವಾಯುವ್ಯದಲ್ಲಿ ಪವರ್ಗವು, ಉತ್ತರದಲ್ಲಿ ಯವರ್ಗವು, ಈಶಾನ್ಯದಲ್ಲಿ ಶವರ್ಗವು, ಮಧ್ಯಕೋಷ್ಟದಲ್ಲಿ ಹಗಯ ಎಂಬ ಈ ಮೂರಕ್ಷರಗಳು ಬರೆದು ಗಂಧಾಕ್ಷತೆಗಳಿಂದ ಪೂಜಿಸಿ ಪ್ರಶ್ನೆಯ ಮೊದಲನೇ ಅಕ್ಷರ ಯಾವ ಕೋಷ್ಟದಲ್ಲಿದೆಯೊ ಹಾಗೆಯೇ ಮನೆಯ ನಿವೇ ಶನವು ಒಂಭತ್ತು ಕೋಷ್ಟಗಳನ್ನಾಗಿ ಮಾಡಿ ಆ ಗೃಹಕೋಷ್ಟಗಳಲ್ಲಿ ಹೇಳ ಲ್ಪಟ್ಟ ಮೇರಿಗೆ ಕೆಳಗೆ ಬರುವ ಶ್ಲೋಕ ಪ್ರಕಾರ ಶಲ್ಯಗಳಂ ತೆಗೆಯಬಹು ದು. ಈಗ ಹ-ಪ-ಯ ಈ ಮೂರಕ್ಷರಗಳು ವರ್ಗಗಳಲ್ಲಿ ಸೇರಿದ್ದರೂ ಮಧ್ಯ ಭಾಗದಲ್ಲಿಯೂ ನೋಡಬೇಕು, ಶಲ್ಯಗಳಿರುವ ಗೃಹದಲ್ಲಿ ವಾಸಮಾಡುವ ವರಿಗೆ ನಾಶವು ಸಿದ್ಧವಾದ್ದರಿಂದ ಅವಶ್ಯವಾಗಿ ಶಲ್ಯಪರಿಕ್ಷೆ ಮಾಡಬೇಕು.

ಶ್ಲೋ॥ ಪೃಚ್ಛೆಯಾಯದಿಅ।ಪ್ರಾಪ್ಯಾಂನರಶಲ್ಯಂತದಾಭವೇತ್ ॥ಸಾ ರ್ಧಹಸ್ತಪ್ರಮಾಣೆ ನತಜ್ಞ ಮಾನುಷಮೃತ್ಯುಕೃತ್‌ಆಗ್ನೇಯ್ಯಾಂದಿಶಿಕ ಪ್ರಶ್ನೆ ಖರದ್ವಯೇ।ರಾಜದಂಡೊಭವೇತ್ತತ್ರಭಯಂನೈವನಿವರ್ತತೆ।ಯಾ ಮ್ಯಾಯಾಂದಿಶಿಚಪ್ರಶ್ನೆಕುರ್ಯಾದಾಕಟಿಸಂಸ್ಥಿತಂ । ನರಶಲ್ಯಂಗೃಹೇ ಶಸ್ಯವರಣಂಚಿರತೋಗೆತಃ।ನೈಋತ್ಯಾಂದಿಶಿಚಪ್ರಶ್ನೆಸಾರ್ಧಹಸ್ತಾದಧೆ

ಸ್ಥಲೇಶುನೋಽಸ್ಥಿಜಾಯತೇ ತತ್ರಬಾಲಾನಾಂಜನಯೇನ್ಮೃತಿಂ | ಪಪ್ರಶ್ನೆ ಪಶ್ಚಿಮಾಯಾಂತುಶಿಶೋಶ್ಶಲ್ಯಂಪ್ರಜಾಯತೇ | ನಾರ್ಥಹಸ್ತೇಗೃಹಸ್ವಾಮಿನಸ್ತಿಷ್ಠತಿಗೃಹನಪಾ| ವಾಯುವ್ಯಾಂದಿಶಿಪಪ್ರಶ್ನೆತುಷಾಂಗಾರಾಶ್ಚತುಃಕರೇ | ಕುರ್ವಂತಿಮಿತ್ರನಾಶಂಚತದಾದುಸ್ವಪ್ನದರ್ಶನಂ | ಉದೀಚ್ಯಾಂದಿಶಿಯಪ್ರಶ್ನೆವಿಪ್ರಶಲ್ಯಂಕಟೇರಧಃ | ತಚ್ಛೀಘ್ರಂನಿರ್ಘನತ್ವಾಯಕುಬೇರಸದೃಶಸ್ಯಹಿ | ಈತಃಸ್ಯಾಂದಿಶಿಶಪ್ರಶ್ನೆಗೋಃಶಲ್ಯಂಚಾರ್ಧಹಸ್ತತಃ | ತದ್ಗೋಧನಸ್ಯನಾಶಾಯಜಾಯತೇಗೃಹಮೇಧಿನಃ | ಹಷಯಾಮಧ್ಯಮೇಕೋಷ್ಠೇವಕ್ಷೋಮಾತ್ರೇಭವೇದ್ಧಳಃ || ನೃಕಪಾಲಮಥೋಭಸ್ಮಲೋಹಂತತ್ಕುಲನಾಶಕೃತ್ || ....

ಟೀ|| ಪ್ರಶ್ನಾಕ್ಷರಗಳಲ್ಲಿ ಅಕಾರ ಮೊದಲು ಅಃವರಿಗೂ ಇರುವ ೧೬ ಸ್ವರಗಳಲ್ಲಿ ಯಾವ ಅಕ್ಷರವಾದರೂ ಮೊದಲನೇ ಅಕ್ಷರವಾದರೆ ಮನೆಯ ಪೂರ್ವಭಾಗದಲ್ಲಿ ಒಂದೂವರೆ ಹಸ್ತದವಳಗೆ ರಾಜಭಯವನ್ನುಂಟುಮಾಡುವ ಕತ್ತೆಯ ಯೆಲುವಿರುವದು. ಚವರ್ಗದಲ್ಲಿ ಪ್ರಶ್ನೆಮಾಡಿದರೆ ದಕ್ಷಿಣದಿಕ್ಕಿನಲ್ಲಿ ಅರ್ಧಮಟ್ಟಿನಲ್ಲಿ ದೀರ್ಘರೋಗದಿಂದ ಮರಣವನ್ನುಂಟುಮಾಡುವಮನುಷ್ಯ ಶಲ್ಯವಿರುವುದು, ಟವರ್ಗದಲ್ಲಿ, ಪ್ರಶ್ನೆಮಾಡಿದರೆ, ನೈಋತ್ಯದಿಕ್ಕಿನಲ್ಲಿ ಒಂದೂವರೆ ಹಸ್ತಪ್ರಮಾಣದಲ್ಲಿ ಶಿಶುಹಾನಿಕರವಾದ ನಾಯಿಯ ಎಲುವಿರುವದು, ತವರ್ಗದಲ್ಲಿ ಪ್ರಶ್ನೆಮಾಡಿದರೆ ಪಡವಲಕಡೆ ಒಂದೂವರೆ ಹಸ್ತಪ್ರಮಾಣದಲ್ಲಿ ಯಜಮಾನನನ್ನು ಯಾವಾಗ್ಯೂ, ಪರಸ್ಥಳ ವಾಸಿಯನ್ನಾಗಿ ಮಾಡುವ ಶಿಶುವಿನ ಯೆಲುವಿರುವದು, ಪವರ್ಗವಲ್ಲಿ ಪ್ರಶ್ನೆಮಾಡಿದರೆ,— ವಾಯುವ್ಯದಿಕ್ಕಿನಲ್ಲಿ ನಾಲ್ಕು ಹಸ್ತಗಳ ಪ್ರಮಾಣದಲ್ಲಿ ಮಿತ್ರನಾಶಕರವಾದ ಹೊಟ್ಟು ಇದ್ದಲು ಇರುವದು, ಅಲ್ಲದೆ ದುಸ್ವಪ್ನಗಳನ್ನು ಸಹ ವುಂಟುಮಾಡುವುದು ಯವರ್ಗದಲ್ಲಿ ಪ್ರಶ್ನೆಮಾಡಿದರೆ,ಉತ್ತರದಿಕ್ಕಿನಲ್ಲಿ ಎರಡು ಮೊಳದಪ್ರಮಾಣದಲ್ಲಿ ಕುಬೇರನನ್ನಾದರೂ ದರಿದ್ರನನ್ನಾಗಿ, ಮಾಡುವ ಬ್ರಾಹ್ಮಣಶಲ್ಯವಿರುವದು. ಶವರ್ಗದಲ್ಲಿ ಪ್ರಶ್ನೆಮಾಡಿದರೆ ಈಶಾನ್ಯದಿಕ್ಕಿನಲ್ಲಿ ಒಂದುವರೆ ಮೊಳದ ಆಳದಲ್ಲಿ ಪಶುನಾಶಕರವಾದ ಹಸುವಿನ ಯೆಲುವಿರುವುದು. ಹ-ಷ-ಯ-ಯೆಂಬೀ ಮೂರಕ್ಷರಗಳನ್ನು ಪ್ರಶ್ನೆಮಾಡಿದರೆ ಮನೆಯ ಮಧ್ಯಪ್ರದೇಶದಲ್ಲಿ ಎದೆ ಆಳದಲ್ಲಿ ಯಜಮಾನನ ಕುಲವನ್ನೇ-ನಾ

ಶಮಾಡತಕ್ಕ ಮನುಷ್ಯನ ತಲೆಚಿನ್ನಾಗಲಿ ಬೂದಿಯಾಗಲಿ ಲೋಹವಾಗಲಿ ಇರುತ್ತದೆ. ಈ ಪ್ರಕಾರವಾಗಿ ಪ್ರಶ್ನೆಗೇನೆ ಬೇರೆ ವಿಧವಾಗಿ ಫಲಗಳು ಹೇಳಿರುವದೆಲ್ಲಾ ವಿಶದವಾಗಿ ವಾಸ್ತುಸರ್ವಸ್ವದಲ್ಲಿ ನೋಡತಕ್ಕದ್ದು.

ಶ್ಲೋ॥ಪಾದಶಲ್ಯೆಚೋಪರೋಗಂಗಮನಂಜಾನುಶಲ್ಯಕೆ|ಬಂಧನಂವಾಹುಶಲ್ಯಾಚಕಷ್ಟಂಪೃಷ್ಠಸ್ಯಶಲ್ಯಕೆ| ಊರುಶಲ್ಯೆರುಣಂಚೈವಸ್ತ್ರೀನಾಶಂಗುಹ್ಯಶಲ್ಯಕೆ|ಜಘನಂಸರ್ವವಿದ್ವೇಷಂಶಿರೋಸ್ಥಿಮರಣಂಧ್ರುವಂ ||

ಟೀ|| ಈಪ್ರಕಾರವಾದ ಯೆಲುಬುಗಳು ಪಾದಸಂಬಂಧಗಳಾಗಿದ್ದರೆ ರೋಗವನ್ನು ಮೊಣಕಾಲಿನವುಗಳಾಗಿದ್ದರೆ ಪರದೇಶಗಮನವು ತೋಳುಗಳ ಯೆಲುವುಗಳಾಗಿದ್ದರೆ ಬಂಧನವನ್ನು ಬೆನ್ನಿನವುಗಳಾಗಿದ್ದರೆ ದುಃಖವನ್ನು ತೊಡೆಗಳ ಸಂಬಂಧವಾದರೆ ಸಾಲವನ್ನು ಗುಹ್ಯಪ್ರದೇಶದ ಸಂಬಂಧವಾದರೆ ಸ್ತ್ರೀನಾಶನವನ್ನು ಮಣಿಕಟ್ಟಿನಸಂಬಂಧವಾದರೆ ಎಲ್ಲರಲ್ಲಿಯೂ ವಿದ್ವೇಷವು ತಲೆಸಂಬಂಧವಾದರೆ ಮರಣವುಂಟುಮಾಡುವದೆಂದು ತಿಳಿಯಬೇಕು (ಪುರುಷಾರ್ಧಸಿತಂಶಲ್ಯಂನಗ್ರಹೇದ್ದೋಷದಂಭವೇತ್) ಎಂಬಿದಾಗಿ ಆಗ್ನೇಯ ಪುರಾಣದಲ್ಲಿ ಹೇಳಿರುವದರಿಂದಾ ಒಂದು ಮಟ್ಟಿನ ಪ್ರಮಾಣಕ್ಕೆ ವೊಳಗೆ ಶಲ್ಯಗಳಿದ್ದರೆ ಮನೆಗಳಲ್ಲಿ ದೋಷವಿಲ್ಲವೆಂದು ತಿಳಿಯಬೇಕು. ಭೂ ಪ ರೀ ಕ್ಷೆ,

ಶ್ಲೋ|| ನಿರ್ಮಾಣೆಪತ್ತನೆಗ್ರಾಮಕ್ಷೇತ್ರಾದೀನಾಂನಮಂತತಃ | ಕ್ಷೇತ್ರಮಾದೌಪರೀಕ್ಷೇತ ಗಂಧವರ್ಣ ರಸಪ್ಲವೈಃ ||

ಟೀ ॥ ಟಪ್ಪಣವು, ಗ್ರಾಮವು, ಗೃಹವು, ಈ ಮೊದಲಾದವುಗಳನ ನಿರ್ಮಾಣ ಮಾಡುವದಕ್ಕೆ ಮೊದಲು ಭೂಮಿಯನ್ನು ವಾಸನೆಯಿಂದಲೂ ಬಣ್ಣದಿಂದಲೂ, ನೀರು ಹರಿಯುವ ರೀತಿಯಿಂದಲೂ ಪರೀಕ್ಷೆ ಮಾಡಬೇಕು. ಈ ವಿಷಯದಲ್ಲಿ ಕಾಮಿಕಾಗಮದಲ್ಲಿ. ॥ಶ್ಲೋ|| ಶುಭೇ ನಿಮಿತ್ತೇಲಬ್ಧೇಚಭೂಪರೀಕ್ಷಾಂಸಮಾಚರೇತ್| ದೈವಂಬ್ರಾಹ್ಮಣಂತಥಾವಾಸ್ತುವೈಷ್ಣವಂಚೈಂದ್ರಮೇವಚ | ಔಕ್ಷಂಚಭೌತಿಕಂಚೈವ ಆಸುರಂಚ ಪಿಶಾಚಕಂ | ರಾಕ್ಷಸಂಚೈವವಾಯುವ್ಯಂವಾರುಣಾಗ್ನೇಯಕೇತಥಾ| ಜಾನೀಯಾಲ್ಲಕ್ಷಣೈರೇತೈ ರ್ಭೂರ್ಗುಣಂ ದೇಶಿಕೋತ್ತಮಃ || ಗೃಹವಂ ಕಟ್ಟಲಿಕ್ಕೆ ಪ್ರಾರಂಭಿಸಿದ ನಂತರ ಶುಭ ಶಕುನಗಳನ್ನು ನೋಡಿಕ್ಕೊಂಡು ಭೂಮಿ

ಯನ್ನು ಪರಿಕ್ಷಿಸಬೇಕು. ಭೂಮಿಯು ಶೈವ, ಬ್ರಾಹ್ಮಣ, ವೈಷ್ಣವ, ಐಂದ್ರ, ಔಕ್ಷ, ಭೌತಿಕ, ಅಸುರ ಪೈಶಾಚಕ, ರಾಕ್ಷಸ, ವಾಯವ್ಯ, ವಾರುಣ, ಆಗ್ನೇಯವೆಂಬದಾಗಿ ೧೨ ಬಗೆಯಾಗಿರುವದು

## ಶೈವ ಭೂಮಿ ಲಕ್ಷಣ.

ಶ್ಲೋ॥ ಕರ್ಣಿಕಾರಾರ್ಜುನಾಶ್ವತ್ಥಕಪಿತ್ಥಾಶೋಕಧಾತಕೀ । ಸ್ಥಲಾರವಿಂದತುಲಸೀದೂರ್ವಾಭಿರ್ವ್ಯಾತತಾಮಹೀ ವಿಷ್ಣುಕ್ರಾಂತಾಖುಕರ್ಣಾಭ್ಯಾಂ ಶಾಲ್ಮಲೀಗಿರಿಶಾರಿಬಾ । ಕಪೋತಶುಕಹಂಸೈಶ್ಚಶೈವೀ ಸಾಶುಭದಾಮಹೀ ॥

ಟೀ॥ ಬೆಟ್ಟದಾವರೆ, ಮತ್ತಿ, ಅಶ್ವತ್ಥ, ಬ್ಯಾಲ, ಆನಂದವೃಕ್ಷ, ಈಚಲುಹುವ್ವು, ನೆಲದಾವರೆ, ತುಲಸಿ, ಗರಿಗೆ, ವಿಷ್ಣುಕ್ರಾಂತ ಇಲಿಕಿವಿಯ ಬಳ್ಳಿ, ಬೂರುಗು, ಬೆಟ್ಟದ ಸುಗಂಧಿ ಹಾರುವಾಣ, ಗಿಣಿ,ಅಂಚಿ ಇವುಗಳಿಂದ ಶೋಭಿಸುವ ಭೂಮಿ ಶೈವವೆಂದು ತಿಳಿಯತಕ್ಕದ್ದು. ಅಂದರೆ ಶಿವ ಸಂಬಂಧ ಭೂಮಿ ಇದು ಶುಭಕರವಾದದ್ದು.

## ಬ್ರಾಹ್ಮಣ ಭೂಮಿ ಲಕ್ಷಣ.

ಶ್ಲೋ॥ ಬಿಲ್ವೈಪಲಾಶೈ ದರ್ಭೈಶ್ಚ ಕುಶೈಶ್ಚಹರಿಣೈತಥಾ । ಹೋಮದ್ರವ್ಯೈಸ್ಸುಗಂಧೈಶ್ಚ ಭೂಬ್ರಾಹ್ಮೀ ಶುಭದಾ ಮತಾ ॥

ಟೀ॥ ಬಿಲ್ವ, ಮುತ್ತುಗ, ದರ್ಭೆ, ಕುಶ, ಅರಳಿ, ಸುವಾಸನೆಯುಳ್ಳ ಹೋಮದ್ರವ್ಯಗಳು, ಇವುಗಳಿಂದ ಕೂಡಿದ ಭೂಮಿಯು ಬ್ರಾಹ್ಮವೆನ್ನಲ್ಪಡುವುದು, ಅಂದರೆ ಬ್ರಹ್ಮಸಂಬಂಧ ಭೂಮಿ ಇದು ಶುಭಕರವಾದ್ದು.

## ವೈಷ್ಣವ ಭೂಮಿ ಲಕ್ಷಣ.

ಶ್ಲೋ॥ ತಿಂದುಕೈಸ್ತಿಂತ್ರಿಣೀಭಿಶ್ಚಕರಂಜೈರ್ವೇಣುಭಿಸ್ತಥಾ। ಕಾರ್ಪಾಸಾರ್ಕಜಪಾಭಿಶ್ಚಹಂಸೈಃಪಕ್ಷಿಮೃಗೈಸ್ತಥಾ । ನಿಷ್ಕಂಟಕೈಸ್ತಥಾವೃಕ್ಷೈರ್ವ್ಯಾಭೂಮಿಸ್ಸಹಿತಾಭವೇತ್ । ವೈಷ್ಣವೀಭೂ ಸ್ಸಮಾಖ್ಯಾತಾ ಶೌರ್ಯವೀರ್ಯ ಪ್ರದಾನ್ನೃಣಾಂ ॥

ಟೀ॥ತೂಬರೆಗಿಡ ಹುಣಿಸೆ ಹೊಂಗೆ, ಬಿದಿರು, ಹತ್ತಿ, ಎಕ್ಕ, ದಾಸವಾಳ, ಅಂಚೆ, ಮೃಗಗಳು, ಮುಳ್ಳಿಲ್ಲದ ಮರಗಳು, ಇವುಗಳಿಂದಾ ಕೂಡಿದ್ದ ವೈಷ್ಣವ ಭೂಮಿಯನ್ನಿಸಿಕೊಳ್ಳುವದು (ವಿಷ್ಣು ಸಂಬಂಧವಾದ ನೆಲ) ಇದು ಶೌರ್ಯ ವೀರ್ಯಕರವಾಗಿರುವದು.

ಐಂದ್ರಭೂಮಿ ಲಕ್ಷಣ,

ಶ್ಲೋ॥ ಕದಳೀಪನಸಾಮ್ರೈಶ್ಚ ಪುನ್ನಾಗೈರ್ವಕುಳೈಸ್ತಥಾ। ಪಾಟಲೈಸ್ಸಿಂಧುವಾರೈಶ್ಚ ತಥಾಚಾಮಲಕೈಃಪುನಃ । ಇಂದೀವರೈಶ್ಚ ವೈಶ್ಯೈಶ್ಚ ಶೂದ್ರೈರ್ಯೈಂದ್ರೀಮಹೀಮತಾ । ಪಾಟಲ್ಯಗರುಗಂಧಾದ್ಯಾಧನಧಾನ್ಯಸಮೃದ್ಧಿದಾ ॥

ಟೀ॥ ಬಾಳೆ, ಹಲಸು, ಮಾವು, ಸುರಹೊನ್ನೆ ಬಕುಳ, ಪಾದರಿ,ಕರೀಲಕ್ಕಿ, ನೆಲ್ಲಿ, ನೈದಲು, ವೈಶ್ಯರು, ಶೂದ್ರರು ಇವುಗಳಿಂದಾ ವ್ಯಾಪ್ತವಾಗಿ ಪಾದರಿ ಅಥವಾ ಅಗರು ವಾಸನೆಯುಳ್ಳದ್ದು ಐಂದ್ರ ಭೂಮಿಯನ್ನುವರು, (ಇಂದ್ರನ ಸಂಬಂಧ ಭೂಮಿ) ಇದು ಧನಧಾನ್ಯ ವೃದ್ಧಿಯಾಗಿರುವದು.

ಔಕ್ಷಭೂಮಿ ಲಕ್ಷಣ,

ಶ್ಲೋ॥ ಅಂಕೋಲೈಶ್ಚ ತಥಾವೃಕ್ಷೈರ್ಮಾರ್ಜಾಲೈರ್ನಕುಲೈಸ್ತಥಾ । ಶಶಗೋಧಾಚಕೋರೈಶ್ಚ ವೃಕೈತಾಕ್ಷಮಹೀಮತಾ । ಶೌರ್ಯವೀರ್ಯಕರೀಸಾಸ್ಯಾತ್ಪ್ರಜಾಸಂಪತ್ಸಮೃದ್ಧಿದಾ ॥

ಟೀ॥ ಅಂಕೋಲೆಗಿಡಗಳು, ಬೆಕ್ಕು, ಮುಂಗುಸಿ, ಮೊಲ, ಹಲ್ಲಿ ಚಕ್ರವಾಕಪಕ್ಷಿ, ತೋಳ, ಇವುಗಳಿಂದೊಡಗೂಡಿ ಶೌರ್ಯವು, ವೀರ್ಯವು, ಮಕ್ಕಳು ಸಂಪತ್ತು ಇವುಗಳಂ ಕೊಡತಕ್ಕಂಥಾದ್ದು ಔಕ್ಷಭೂಮಿಯೆನ್ನಲ್ಪಡುವದು, (ನಕ್ಷತ್ರ ಸಂಬಂಧ ಭೂಮಿ.)

ಭೌತಿಕ ಭೂಮಿ ಲಕ್ಷಣ,

ಶ್ಲೋ॥ ನಿರ್ಗುಂಡೀಮಾಧವೀದೂರ್ವಾತ್ವಂಕೋಲೈಃಕಿಂಶುಕೈಸ್ತಥಾ । ಮಲ್ಲಿಕಾಕರವೀರೈಶ್ಚ ಮಧೂಕೈರ್ಭಾತಕೀಮತಾ । ಅನ್ನದಾಪುಷ್ಟಿದಾ ಸ್ಯಾಚ್ಚಾಂಭಸ್ಮಗಂಧಸಮನ್ವಿತಾ ॥

ಟೀ॥ ಕುಬ್ಜಕ, ಲಕ್ಕಗರಿಕೆ, ಅಂಕೋಲೆ, ಮುತ್ತುಗ, ಮಲ್ಲಿಗೆ, ಹಿಪ್ಪೆ, ಈ ಮರಗಳಿಂದ ಕೂಡಿದ್ದಾಗಿ ಬೂದಿಯ ವಾಸನೆಯುಳ್ಳದ್ದಾಗಿ ಜನರಿಗೆ ಅನ್ನವನ್ನು ಪುಷ್ಟಿಯನ್ನು ಕೊಡುವಂಥಾದ್ದು ಭೌತಕಿಯನ್ನಲ್ಪಡುವದು, ಭೂಭೂತಸಂಬಂಧವಾದದ್ದು,

ಅಸುರಭೂಮಿ ಲಕ್ಷಣ,

ಶ್ಲೋ॥ ಭಲ್ಲಾತಕೈರ್ಮಹಾವೃಕ್ಷೈರ್ದುಷ್ಟಸತ್ವೈಃಪಲಾಂಡುಭಿಃ । ಕಿರಾತಕೈಃಕಕುಭೈಃಗೃಧ್ರೈಸ್ಸರ್ಪೈಸ್ಸಮನ್ವಿತಾ । ಅಸುರೀಯುದ್ಧದಾ ಭೂಮಿಃ ಪೂತಿಗಂಧಸಮನ್ವಿತಾ ॥

ಟೀ ॥ ಗೇರು ಮರಗಳು- ಕ್ರೂರ ಜಂತುಗಳು, ಬೆಳ್ಳುಳ್ಳಿ ಬೇಡರು ಕೆಮ್ಮತ್ತಿರಸಗಳು ಕ್ರೂರಗಳಾದ ಹಪ್ಪುಗಳು ಇವುಗಳಿಂದ ಕೂಡಿದ್ದಾಗಿ ಕೆಟ್ಟಸುವಾಸನೆಯುಳ್ಳದ್ದು, ಅಸುರಭೂಮಿ ಯನ್ನಲ್ಪಡುವರು, (ಅಸುರರ ಸಂಬಂಧವಾದದ್ದು) ಇದು ಯುದ್ಧಪ್ರದವಾದುದು,

ಪೈ ಶಾ ಚ ಭೂ ಮಿ ಲ ಕ್ಷ ಣ

ಶ್ಲೋ॥ ಶಾಲ್ಮಲೀಭಿಸ್ತಥಾಭೂಮಿರ್ವಕುಳೈಶ್ಚವಿಭೀತಕೈಃ ಶ್ರೀಪ್ರಾಕ್ತಕೈಃ ಖರೈರುಷ್ಟ್ರೈಸ್ಸೃಗಾಲೈಸ್ಸೂಕರೈಃಪುನಃ। ಚಂಡಾಲೈಶ್ಚಪುಳಿಂದೈಶ್ಚಪೂತಿಗಂಧೋಷರಾಚಸಾ। ಪೈಶಾಚೀಚಸ್ಮೃತಾಶಾಸ್ತ್ರೈಸ್ಸರ್ವನಾಶಸಮನ್ವಿತಾ ॥

ಟೀ॥ ಬೂರುಗೆ, ಬಕುಳ, ತಾರೆ, ಬೆಳ್ಳು, ಕತ್ತೆ, ವಂಟೆ, ನರಿ, ಹಂದಿ, ಚಂಡಾಲರು, ಇವುಗಳಿಂದ ಕೂಡಿದ್ದಾಗಿ ಕೆಟ್ಟ ವಾಸನೆಯುಳ್ಳ ಚೌಳುಭೂಮಿಯು ಪೈಶಾಚಕವೆನಲ್ಪಡುವುದು ( ಪಿಶಾಚ ಸಂಬಂಧವಾದ ಭೂಮಿ ) ಇದು ಸರ್ವನಾಶಕರವಾದದ್ದು, ರಾಕ್ಷಸ ಭೂಮಿ ಲಕ್ಷಣ,

ಶ್ಲೋ॥ ಚಂಡಾಲವಿಷಚೋರೈಶ್ಚಶಿರೋರೋಗಾದಿಭಿಸ್ತಥಾ। ಮರೀಚಗುಳಗಂಧಾಢ್ಯಾ ರಾಕ್ಷಸೀಸಾಕ್ಷಯಪ್ರದಾ ॥

ಟೀ ॥ ಚಂಡಾಲರು, ವಿಷವು, ಕಳ್ಳರು, ತಲೆನೋವು, ಮೊದಲಾದ ರೋಗಗಳುಂಟಾಗಿ ಮೆಣಸು, ಬೆಲ್ಲಗಳ ವಾಸನೆಯುಳ್ಳದ್ದಾಗಿ ನಾಶವನ್ನುಂಟು ಮಾಡತಕ್ಕದು ರಾಕ್ಷಸಭೂಮಿ ಎನಲ್ಪಡುವುದು.

ವಾ ಯ ವ್ಯ ಭೂ ಮಿ ಲ ಕ್ಷ ಣ

ಶ್ಲೋ॥ ಗೋಮಾಯುಗಣಸಂಕೀರ್ಣಾ ಝುಲ್ಲಿಕಾಶರ್ಕರಾನ್ವಿತಾ। ಯಾವಾಯವ್ಯೇತಿಸಾಪ್ರೋಕ್ತಾದುಃಖದೈರ್ಘಸ್ಯದಾಯಿಕಾ ॥

ಟೀ॥ ನರಿಗಳಿಂದಲೂ, ಸಣ್ಣಸಣ್ಣ ಪುಡಿಕಲ್ಲುಗಳಿಂದಲೂ ಕೂಡಿದ್ದಾಗಿ ದುಃಖವನ್ನು ದರಿದ್ರವನ್ನೂ ವುಂಟುಮಾಡುವದು ವಾಯುವ್ಯ ಭೂಮಿ ಎಂದು ತಿಳಿಯುವದು, ವಾರುಣ ಭೂಮಿಲಕ್ಷಣ

ಶ್ಲೋ॥ ಯಾಪೂಗೈರಾವೃತಾಭೂಮಿರ್ವಾರುಣೀಸರ್ವಸಿದ್ಧಿದಾ ॥

ಟೀ॥ ಅಡಿಕೇಮರಗಳಿಂದೊಡಗೂಡಿ ಯೆಲ್ಲಾ ಸಿದ್ಧಿಗಳನ್ನು ಕೊಡುವಂಥಾದ್ದು, ವಾರುಣ (ವರುಣ ಸಂಬಂಧ) ಭೂಮಿ ಯೆನಲ್ಪಡುವದು,

ಶ್ಲೋ॥ ಸ್ನುಹಿತ್ವೇಷ್ಮಾತಕಾದ್ಯೈಶ್ಚ ಸಂಯುಕ್ತಾಕ್ಷುದ್ರ ಶರ್ಕರೈಃ ।
ವೂಷರಾತೋಯಹೀನಾಚ ಆಗ್ನೇಯಿಸರ್ವನಾಶಿನೀ ।

ಟೀ। ಮುಂಡಗಳ್ಳಿ, ಬಿಳ್ಳು ಮೊದಲಾದ ಮರಗಳಿಂದಲೂ ಚಿಕ್ಕಮರಳಿನಿಂದಲೂ ಕೂಡಿದ್ದಾಗಿರುವ ಭೂಮಿಯು ಆಗ್ನೇಯವು ಅಗ್ನಿಸಂಬಂಧವೆನಲ್ಪಡುವದು, ಇದು ಸರ್ವನಾಶಕರವಾದದ್ದು.

ಶ್ಲೋ॥ ಶೈವೇಶೈವೀನಮಾಖ್ಯಾತಾ ವೈಷ್ಣವೋ ವಿಷ್ಣುದೇಶಕೆ ।
ಬ್ರಾಹ್ಮೀನ್ಯಾದ್ಬ್ರಹ್ಮದೇಶೇತು ಶೈವೀವಿಪ್ರಾದಿಯೋಗ್ಯತಾ ।
ಶೈವೀವಿಪ್ರವಿಶಿಷ್ಟಾಚ ಬ್ರಾಹ್ಮೀನ್ಯಾದ್ವೈಷ್ಣವೀಚಭೂಃ।ಭೂಭೃತಾಂ
ನ್ಯಾದ್ವಿಶಾಮಕ್ಷೀ ಶೂದ್ರಾಣಾಂಭೌತಕೀಸ್ಮೃತಾ । ಸರ್ವೇಷಾಂ
ವಾರುಣೀ ಶಸ್ತಾಸ್ಸರ್ವಾಸರ್ವೇಷು ವಾಮತಾಃ। ಪೈಶಾಚೀತ್ವಾಸುರೀ
ಭೂಮಿರಾಕ್ಷಸೀಯಾಚಭೂರ್ಮತಾ। ಅಂತ್ಯಜಾನಾಮಿತಿ ಪ್ರೋಕ್ತಾ
ಹಲತಃಕರ್ಷಿತಾಚಯಾ। ನಾಚಗೋಭಿಶ್ಚಿರಂಭಿತ್ವಾಭೂಗ್ರಾಹ್ಯಾವ
ತ್ಸರೋಷ್ವರ್ತಃ

ಟೀ॥ ಶೈವಭೂಮಿಯು ಈಶ್ವರನಿಗೂ ಬ್ರಾಹ್ಮಣರಿಗೂ ಯೋಗ್ಯವಾದದ್ದು ವೈಷ್ಣವಭೂಮಿಯು ವಿಷ್ಣುವಿಗೂ ಬ್ರಹ್ಮಭೂಮಿಯು ಬ್ರಾಹ್ಮಣನಿಗೂ ಪ್ರಶಸ್ತವಾಗಿರುವದು, ವೈಷ್ಣವಭೂಮಿಯೂ ಬ್ರಹ್ಮಭೂಮಿಯು ಕ್ಷತ್ರಿಯರಿಗೆಪ್ರಶಸ್ತವು ವೈಶ್ಯರಿಗೆ ಮೌಕ್ಷಭೂಮಿಯೂ ಶೂದ್ರರಿಗೆ ಭೂತಭೂಮಿಯು ಎಲ್ಲಾಜಾತಿಗೂ ವಾರುಣ ಭೂಮಿಯು ಮೇಲೆ ಹೇಳಲ್ಪಟ್ಟ ಎಲ್ಲಾ ಭೂಮಿಯು ಎಲ್ಲರಿಗೂ ಆಗಬಹುದು, ಪೈಶಾಚಭೂಮಿಯು ಆಸುರಭೂಮಿಯೂ ರಾಕ್ಷಸಭೂಮಿಯೂ, ಚಂಡಾಲರಿಗೆ ಯೋಗ್ಯವಾಗಿರುವದು. ಇತರರು ಪರಿಗ್ರಹಿಸಬೇಕಾದರೆ ಈ ಭೂಮಿಯನ್ನು ನೂರಾವರ್ತಿ ಉತ್ತು ಆಕಳುಗಳಿಂದಾ ತುಳಿಸಿಯಾದಮೇಲೆ ಗ್ರಹಿಸಬಹುದು.

ಶ್ಲೋ॥ ಕ್ಷೇತ್ರಸ್ಥಿತಿ ವಶಾದುರ್ವೀಕಥಿತಾಚಾನುಲೋಮಿನಾಂ ॥
ಅನೂಪಾಜಾಂಗಲಾಚೇತಿವಾಸ್ತುಯೋಗ್ಯಾದ್ವಿಧಾಧರಾ ॥

ಟೀ॥ ಭೂಮಿಯ ಸ್ವಭಾವಾನುಗುಣವಾಗಿ ಬ್ರಾಹ್ಮಣಾದಿವರ್ಣಗಳಿಗೆ ಹೇಳಲ್ಪಟ್ಟಿತು, ಮತ್ತು ಈ ಭೂಮಿಯು ಅನೂಪವೆಂಬದಾಗಿಯೂ ಜಾಂಗಲವೆಂಬದಾಗಿಯೂ ಎರಡು ವಿಧವಾಗಿರುವದು.

ಶ್ಲೋ॥ ಸ್ಥಿರಂಗುರುತರಂಭೂರಿಶರ್ಕರಂಕ್ಷಾರವಾರಿಣಾ |
ಯುಕ್ತಮಲ್ಪೀಯಸಾತ್ಯಂ ಖಾತೇಗಂಧೇಪಿಚಾಂಗಲಂ | ಜಾಂಗಲಂಕ
ದಳೀತಾಳಪಸನಾದಿತರೂಧ್ಭವಂ ॥

ಟೀ॥ ಜಾಂಗಲವೆಂಬ ಕ್ಷೇತ್ರವು ಸ್ಥಿರವಾಗಿಯೂ ಭಾರವಾಗಿಯೂ ವಿಶೇಷ ಮುಳ್ಳಿನೊಡನೆ ಕೂಡಿದ್ದಾಗಿಯೂ ಆಳವಾಗಿ ತೆಗೆದರೆ ಸ್ವಲ್ಪವಾದ ವುಪ್ಪು ನೀರಿನಿಂದ ಕೂಡಿರುವದು ಇದು ಬಾಳೆ, ಹಲಸು ಮೊದಲಾದ ವೃಕ್ಷ ಗಳಿಗೆ ಸ್ಥಾನವಾಗಿರುವದು.

## ಅ ನೂ ಪ ಲ ಕ್ಷ ಣ.

ಶ್ಲೋ॥ ಕಶೇರುಕೈರವಾಕೀರ್ಣಂರೂಢಸೌಗಂಧಿಕೋತ್ಪಲಂ|ಸೂಕ್ಷ್ಮ
ವಾಲುಕಮಾತ್ರೋಜ್ವಲಜ್ವಲಂ | ಸರ್ವಸ್ಯೋಚಿತಂಪುಷ್ಪಫಲವೃಕ್ಷಶು
ಭೋದಯಂ | ಸರ್ವರ್ತುಸುಖದಂಸರ್ವಹಿತಮಾನೂಪಮಿಷ್ಯತೆ॥

ಟೀ॥ ಎಳಚೀ ಮರಗಳಿಂದ ಕೂಡಿದ್ದಾಗಿಯೂ ಸಣ್ಣ ಮರಗಳುಳ್ಳದ್ದಾಗಿ ಸ್ವಲ್ಪ ಆಗಿದನೂತ್ರಕ್ಕೆ ಹಾರುವ ಝರಿಯುಳ್ಳದ್ದಾಗಿಯೂ ಎಲ್ಲಾ ವಿಧ ಪೈರುಗಳು ಬೆಳೆಯುವದಾಗಿಯೂ ಹುವ್ವು ಗಿಡಗಳು ಫಲ ವೃಕ್ಷಗಳು, ಬೆಳೆಯುವದಕ್ಕೆ ಯೋಗ್ಯವಾಗಿಯೂ ಎಲ್ಲಾ ಋತುವುಗಳಲ್ಲೂ ಸೌಖ್ಯವಾ ಗಿಯೂ ಎಲ್ಲಕ್ಕೂ ಹಿತವಾಗಿಯೂ ಇರುವದು ಅನೂಪಕ್ಷೇತ್ರವು ಯೆಂದು ಅನಲ್ಪಡುವದು.

ಶ್ಲೋ ॥ ಜಾಂಗಲಾನೂಪನೆಂಮಿಶ್ರಗುಣಂಸಾಧಾರಣಂಸ್ಮೃತಂ |
ತಯೋಸ್ಸಂಪರ್ಕಸಂಯುಕ್ತಂ ಸಾಧಾರಣ ಮುದಾಹೃತಂ ॥

ಟೀ॥ ಈ ಜಾಂಗಲಾನೂಪಗಳು ಎರಡರ ಗುಣವುಳ್ಳದ್ದಾಗಿ ಎರಡು ಶೇರಿ ರುವದು ನಾಧಾರಣ ಕ್ಷೇತ್ರವೆನ್ನಲ್ಪಡುವದು, ಇದು ಮಧ್ಯಮವಾಗಿರು ವದು. ಮತ್ತು ಪದ್ಮಕ, ಭದ್ರಕ, ಧೂಮ್ರ, ಪೂರ್ಣ, ಎಂಬದಾಗಿ ನಾಲ್ಕು ವಿಧಗಳಾಗಿರುವವು, ಇವುಗಳ ಲಕ್ಷಣ ಈ ಆಗಮದಲ್ಲಿಯೇ ನೋ ಡತಕ್ಕದ್ದು.

ಶ್ಲೋ॥ ಶ್ವೇತವರ್ಣಾ ದ್ವಿಜಾತೀನಾಂಕ್ಷತ್ರಿಯಾಣಾಂಚರೋಹಿತಾ ॥
ಪೀತವರ್ಣಾಚ ವೈಶ್ಯಾನಾಂ ಶೂದ್ರಾಣಾಂ ಕೃಷ್ಣವರ್ಣಕಾ ॥

ಟೀ|| ಬ್ರಾಹ್ಮಣರಿಗೆ ಬಿಳಿಯಬಣ್ಣವುಳ್ಳ ಭೂಮಿಯು ,ಕ್ಷತ್ರಿಯರಿಗೆ ಕೆಂಪು ಬಣ್ಣವುಳ್ಳ ಭೂಮಿಯು ವೈಶ್ಯರಿಗೆ, ಹಸರು ಬಣ್ಣವುಳ್ಳ ಭೂಮಿಯುಂಶೂದ್ರರಿಗೆ ಕಪ್ಪುಬಣ್ಣವುಳ್ಳ ಭೂಮಿಯು ಶ್ರೇಷ್ಠವಾದದ್ದು ಮಿಶ್ರವರ್ಣದವರಿಗೆ ಮಿಶ್ರಬಣ್ಣವುಳ್ಳ ಭೂಮಿಯು ಶ್ರೇಷ್ಠವಾದದ್ದು. ಈ ವಿಷಯದಲ್ಲಿ ವಸಿಷ್ಠವಚನ-ಶ್ಲೋ|| ಶ್ವೇತಾಶಸ್ತಾದ್ವಿಜೇಂದ್ರಾಣಾಂರಕ್ತಾಭೂಮಿರ್ಮಹೀಭುಜಾಂ|ವಿಶಾಂಪೀತಾಚಶೂದ್ರಾನಾಂ ಕೃಷ್ಣಾನ್ಯೇಷಾಂಚಮಿಶ್ರಿತಾ ||

ಶ್ಲೋ|| ಚತುರ್ವರ್ಣಾ ದ್ವಿಜಾತೀನಾಂ ಕ್ಷತ್ರಿಯಾಣಾಂತ್ರಿವರ್ಣಕಾ
ವೈಶ್ಯಾನಾಂಚದ್ವಿವರ್ಣಾಂಟಿಶೂದ್ರಾಣಾಕೃಷ್ಣವರ್ಣಕಾ ||

ಟೀ|| ಬ್ರಾಹ್ಮಣರಿಗೆ ನಾಲ್ಕು ವಿಧ ಬಣ್ಣವುಳ್ಳ ಭೂಮಿಯೂ ಕ್ಷತ್ರಿಯರಿಗೆ ಬಿಳೀ ಬಣ್ಣಬಿಟ್ಟು ಮಿಕ್ಕ ಮೂರು ಬಣ್ಣಭೂಮಿಯೂ ವೈಶ್ಯರಿಗೆ ಹಸರು ಕಪ್ಪು ಬಣ್ಣವುಳ್ಳ ಭೂಮಿಯೂ ಶೂದ್ರರಿಗೆ ಕಪ್ಪುಬಣ್ಣವೂ ಆಗಬಹುದು ಅಂದರೆ ಅವರವರ ಜಾತಿಗೆ ತಕ್ಕ ಭೂಮಿಯು ಶ್ರೇಷ್ಠವು, ಅಥವಾ ಕಮ್ಮಿಯಾದ ವರ್ಣವು ಆಗಬಹುದು ಹೀಗೆಯೇ, ಗಂಧಕ್ಕೂ ತಿಳಿಯತಕ್ಕದ್ದು. ಹೀಗೆಂದು ಕಾಮಿಕಾಗಮದಲ್ಲಿ-ಶ್ಲೋ|| ಹೀನಜಾತೆಸ್ಸಮುದ್ದಿಷ್ಟಮುತ್ಸ್ಯಷ್ಟೋಕ್ತಂನಹೀನತಾ ಸರ್ವದೇವೇಷುಯೋಗ್ಯಕಂ | ಮಿಶ್ರವರ್ಣಯುತಂವಾಸ್ತುಸ್ರೇಷ್ಟತದ್ವರ್ಣಜನ್ಮನಾಂ || ಮಧುಗಂಧಾ ಬ್ರಾಹ್ಮಣಾನಾಂ ಕಟುಗಂಧಾ ಮಹೀಭುಜಾಂ | ತಿಕ್ತಗಂಧಾತುವೈಶ್ಯಾನಾಂ ಶೂದ್ರಾಣಾಂತುಕಷಾಯಕಾ ||

ಟೀ|| ಬ್ರಾಹ್ಮಣರಿಗೆ ಶೀಯಾಗಿರುವ ನೆಲವು ಕ್ಷತ್ರಿಯರಿಗೆ ಮೆಣಸಿನ ವಾಸನೆಯುಳ್ಳ ಭೂಮಿಯು ವೈಶ್ಯರಿಗೆ ಬೇವಿನ ರಸದಂತೆ ಕಹಿಯಾಗಿರುವ ನೆಲವೂ ಶೂದ್ರರಿಗೆ ಅಳಲೇ ಕಾಯಿಯಂತೆ ರುಚಿಯುಳ್ಳ ನೆಲವೂ ಸಂಕರ ಜಾತಿಯವರಿಗೆ ಮಿಶ್ರರಸವುಳ್ಳ ನೆಲವೂ ಯೋಗ್ಯವಾದದ್ದು.

ಶ್ಲೋ|| ಪದ್ಮಚಂದನ ಗಂಧಾತು ಬ್ರಾಹ್ಮಣಾನಾಂ ವಿಶೇಷತಃ|ಕ್ಷತ್ರಿಯಾಣಾಂ ವಿಶೇಷೇಣ ಗಜವಾರಣಗಂಧಿನೀ | ಪಶುಗಂಧಾತು ವೈಶ್ಯಾನಾಂ ಶೂದ್ರಾಣಾಂ ಮದ್ಯಗಧಿನೀ ||

ಟೀ|| ಬ್ರಾಹ್ಮಣರಿಗೆ ತಾವರೆ ಶ್ರೀಗಂಧ ಈ ವಾಸನೆಯುಳ್ಳಭೂಮಿಯೂಕ್ಷತ್ರಿಯರಿಗೆ ಆನೆ. ಕುದುರೆ, ವಾಸನೆಯುಳ್ಳ ನೆಲವೂ, ಹಸುವುಗಳ ವಾಸನೆ

ಯುಳ್ಳ ಭೂಮಿಯು ವೈಶ್ಯರಿಗೂ ಹೆಂಡದನಾಸನೆಯುಳ್ಳ ಭೂಮಿಯುಶೂ ದ್ರರಿಗೂ ಯೋಗ್ಯವಾದದ್ದು. ಈ ವಾಸನೆ ವಿಷಯದಲ್ಲಿ ಅನೇಕ ಗ್ರಂಥ ಗಳಲ್ಲಿ ನಾನಾಪ್ರಕಾರ ಹೇಳಿರುವದ್ದರಿಂದಾ ವಿಕಲ್ಪವಾಗಿ ಎಲ್ಲಾ ಗ್ರಹಿಸ ಬಹುದು (ಕಾರಿಕೆಯಲ್ಲಿ) ಘೃತಾಸೃಗನ್ನಸುದಿರಾಗಂಧಾಚಕ್ರಮಶೋಭವೇ ತ್॥ ಅಂದರೆ ಬ್ರಾಹ್ಮಣಾದಿವರ್ಣದವರಿಗೆ ಕ್ರಮವಾಗಿ ತುಪ್ಪ-ರಕ್ತ-ಅನ್ನ ಹೆಂಡ-ಈ ರುಚಿಯುಳ್ಳ ನೆಲವು ಶ್ರೇಷ್ಟವೆಂದು ಹೇಳಲ್ಪಟ್ಟಿಥೆ. ॥ಶ್ಲೋ॥ ಉದಕಾದಿಪ್ಲವಮಿಷ್ಟಂವಿಪ್ರಾದೀನಾಂಪ್ರದಕ್ಷಿಣೇನೈವ। ವಿಪ್ರಸ್ಸರ್ವತ್ರವಸೆ ದೆ ಮಥೇಷ್ಟಮನ್ಯೇಷಾಂ ॥ ಯೆಂದು ಭೃಗುವು ಹೇಳಿರುವದ್ದರಿಂದಾ ಭೂಮಿ ಯಲ್ಲಿ ಹರಿಯುತಕ್ಕನೀರು ಬಾಹ್ಮಣಾದಿ ವರ್ಣದವರಿಗೆ ಪ್ರದಕ್ಷಿಣ ಕ್ರಮವಾ ಗಿರಬೇಕು, ಬ್ರಾಹ್ಮಣನು ಯಾವ ವರ್ಣವಾದ ಭೂಮಿಯುಳ್ಳಾ ದರೂ ಮನೆಕ ಟ್ಟಬಹುದು ಶ್ಲೋ॥ ಮನಸಶ್ಚಕ್ಷುಷೋರ್ಯತ್ರಸಂತೋಷೋಜಾಯತೇಭುವಿ ತಸ್ಯಾಂಕಾರ್ಯಂಗೃಹಂಸರ್ವೈರಿತಿಗರ್ಗಾದಿಸಮ್ಮತಂ। ಎಂದು ವಾಸ್ತುಶಾಸ್ತ್ರದಲ್ಲಿ ಹೇಳಿರುವದ್ದರಿಂದ ತನ್ನಮನಸ್ಸಿಗು ಕಣ್ಣಿಗೂ ಎಲ್ಲಿ ಸಂತೋಷ ಉಂಟಾ ಗಿರುತ್ತದೋ, ಆಭೂಮಿಯಲ್ಲಿ ಯೆಲ್ಲಾವರ್ಣದವರು ಮನೇಕಟ್ಟಬಹುದೆಂ ದು ಗರ್ಗಾದಿ ಮಹಾಋುಷಿಗಳ ಮತವಾಗಿರುತ್ತೆ, ಭೂಶೋಧನೆ ಶ್ಲೋ॥ ಕಟಿಪ್ರಮಾಣಂಶೂದ್ರಾಣಾಂವೈಶ್ಯಾನಾಂನಾಭಿಮಾತ್ರತಃ। ಗ್ರೀವಪ್ರಮಾಣಂ ವಿಪ್ರಾಣಾಂನೃಪಾಣಾಂಮೂರ್ಧಮಾತ್ರತಃ॥ ಟೀ॥ ಭೂಮಿಯನ್ನು ಶೋಧಿ ಸುವ ವಿಷಯದಲ್ಲಿ ಶೂದ್ರರಿಗೆನಡುವಿನವರಿಗೂ ವೈಶ್ಯರಿಗೆಹೊಕ್ಕಳವರಿವಿಗೂ ಬ್ರಾಹ್ಮಣರಿಗೆ ಕೊರಳಿನವರಿವಿಗೂ ಕ್ಷತ್ರಿಯರಿಗೆ ತಲೆವರಿವಿಗೂ ಗುಣಾವ ರ್ತವನ್ನು ಮಾಡಬೇಕು (ಮತ್ತೊಂದುಪ್ರಮಾಣ) ಬ್ರಾಹ್ಮಣರಿಗೂ ಕ್ಷತ್ರಿ ಯರಿಗೂ ಆರುಗೇಣುಪ್ರಮಾಣವೂ ದೇವಸ್ಥಾನಗಳಿಗೆ ಒಂಭತ್ತು ಗೇಣುಪ್ರ ಮಾಣವೂಅಥವಾಏಳಗೇಣು ಪ್ರಮಾಣವೂ ವೈಶ್ಯರಿಗೂ ಶೂದ್ರರಿಗೂ ಐ ದುಗೇಣು ಪ್ರಮಾಣವೂ ಮಿಕ್ಕಾದವರಿಗೆಲ್ಲಾ ನಾಲ್ಕುಗೇಣು ಆಳವೂ ಭೂ ಮಿಯನ್ನಶೋಧಿಸಬೇಕು. ಹೀಗೆ ಮಾಡುವದು ಶುಭಕರವೆಂದುಹೇಳುವರು ಮತ್ತು ಭೂಮಿಯನ್ನು ಶೋಧಿಸುವಪ್ರಕಾರ ಮುಹೂರ್ತ ಮಾರ್ತಾಂಡ ದಲ್ಲಿ ಹೇಳಿದ್ದೆ. ಹ್ಯಾಗೆಂದರೆ, ಶ್ಲೋ॥ ಶ್ವಭ್ರಂಹಸ್ತಮಿತಂಖನೇದಿಹ

ಜಲಂಪೂರ್ಣಂನಿಶಾನ್ತೇ ನ್ಯಸೇತ್ಪ್ರಾತರ್ದೃಷ್ಟ್ವಜಲಂಸ್ಥಲಂ|ಸಪುಜ
ಲಂಪುಧ್ಯಂತ್ವಸತ್ವಾಸ್ಫಟಿತಂ|ಜ್ಞಾತ್ವೈವಂನಿಖನೆದ್ಗೃಹಾಧಿಕಭುವಂ
ಸತ್ವಾಜಲಾಂತಸ್ತರೋೀಯಾವದ್ವಾ| ಪುರುಷಸ್ತತಃ ಕಪಿಶಿರಸ್ತುಲ್ಯಾ
ಶ್ಮಭಿಃ ಪೂರಯೇತ್ || ಅಂದರೆ,—ಮನೆ ಕಟ್ಟತಕ್ಕ ನಿವೇಶನದಲ್ಲಿ
ಒಂದು ಮೊಳ ಆಳವಾಗಿ ಗುಣಿಯುಂ ತೆಗೆದು ಆ ಗುಣಿಯಲ್ಲಿ ಸೂರ್ಯಾ
ಸ್ತಮಾನ ಅಂದರೆ ಅರ್ಧಸೂರ್ಯನು ಕಾಣುತಿರುವಾಗ ನೀರು ತುಂಬಿ
ಪ್ರಾತಃಕಾಲದಲ್ಲಿ ನೋಡಲು ಆ ಗುಣಿಯಲ್ಲಿ ನೀರಿದ್ದರೆ ಶುಭವು, ನೀರಿ
ಲ್ಲದಿದ್ದರೆ ಮಧ್ಯಮವು, ಪೊಣಗಿ ಪೊಡೆದುಹೋಗಿದ್ದರೆ ಅಶುಭವು ಈ ಪ್ರ
ಕಾರವೇ ನಾರದರು ಹೇಳಿಧಾರೆ. ಶ್ಲೋ|| ತಥಾನಿಶಾದೌತತ್ಕೃತ್ವಾ
ಸುಪಾನೀಯೇನಪೂರಯೇತ್ | ಪ್ರಾತರ್ದೃಷ್ಟೇಜಲೇವೃದ್ಧಿಂಸಮಂ
ಪಂಕೇವ್ರಯಕ್ಷಯಃ || ಮತ್ತು ಪ್ರಕಾರಾಂತರವಾಗಿ ಕಾಮಿಕದಲ್ಲಿ.
ಶ್ಲೋ|| ಪೂರ್ವ್ಯಮಾಣೇಮಹೀಂಖತ್ವಾ ಗರ್ತೆಸ್ವೈರೇವಪಾಂಸುಭಿಃ |
ಅಧಿಕನ್ಯೂನತುಲ್ಯೇಷುಪಾಂಸುಷ್ವೇತಾದೃಶಂಫಲಂ || ಸಪುಷ್ಪಕುಂ
ಭತೋಯೇನಪೂರ್ವ್ಯಮಾಣೆವಟೇಯದಿ | ಶಸ್ತ್ರಂಪ್ರದಕ್ಷಿಣಾವರ್ತ
ಮುದಕಂಶಾಂತಬುದ್ಬುದಂ | ಉತ್ತಾನಪುಷ್ಪಕಂಶ್ರೇಷ್ಠಂನತ್ವಧೊ
ಮುಖಪುಷ್ಪಕಂ||ಸರ್ಷಪಾನಾಂತಿಲಾನಾಂ ವಾಬೊಪ್ತಾನಾಮಂಕು
ರಾಭುವಿ|ತ್ರಿರಾತ್ರೇಣಪ್ರಜಾಯಂತೆ ಯಸ್ಯಾಂಸಾಸ್ಯಾನ್ಮಹೀಶುಭಾ

ಎಂದು ಹೇಳಿರುವದ್ದರಿಂದ ಮನೆಯನ್ನು ಕಟ್ಟತಕ್ಕ ಭೂಮಿಯಲ್ಲಿ ಮೊ
ದಲು ಒಂದು ಗುಣಿ ತೆಗೆದು ಆದರ ಮಣ್ಣಿನಿಂದಲೇ ಪೂರ್ತಿಯಾದರೆ
ಅದು ಹೆಚ್ಚಾಗಲಿ, ಸಮವಾಗಲಿ ಕಡಿಮೆಯಾಗಲಿ ಆದರೆ ಪೂರ್ವದಂತೆ
ಫಲ ತಿಳಿಯತಕ್ಕದ್ದು. ಮತ್ತು ಹುವ್ವಿನಿಂದೊಡಗೂಡಿದ ಕಲಶದ ಜಲವನ್ನು
ಆಗುಣಿಯಲ್ಲಿ ತುಂಬಲು ಅದು ಬುಡ್ಡೆಗಳಿಲ್ಲದೆ ಪ್ರದಕ್ಷಿಣವಾಗಿ ಸುಳಿ
ಯುಂಟಾಗಿ ಹುವ್ವು ಊರ್ಧ್ವ ಮುಖವಾಗಿದ್ದಲ್ಲಿ ಶುಭವು, ಅಧೋಮು
ಖವಾದರೆ ಪ್ರಶಸ್ತವಲ್ಲವು ಮತ್ತು, ಸಾಸುವೆ, ಯೆಳ್ಳು ಕಲಸಿ ಬಿತ್ತಿ
ಲು ಅವುಮೂರು ದಿನಗಳೊಳಗಾಗಿಯೇ ಮೊಳಕೆ ಹೊರಟರೆ ಆ ಭೂಮಿ
ಶ್ರೇಷ್ಠವಾದದ್ದು.

ಈ ಪ್ರಕಾರ ಶುಭಾಶುಭ ಫಲವಂ ತಿಳಿದು ನಂತರ ನಿವೇಶನದ ಭೂಮಿಗಿಂತಲೂ ಸ್ವಲ್ಪ ಅಧಿಕವಾಗಿ ಭೂಮಿಯಲ್ಲವೂ ನೀರು ಮುಟ್ಟದ ಪರ್ಯಂತವಾಗಲಿ ಭೂಮಿಯ ಪೊರೆಗಳೆಲ್ಲಾ ಕಳೆದುಶುದ್ಧಭೂಮಿ ಪರ್ಯಂತವಾಗಲಿ ಅಥವಾ ಪುರುಷ ಪ್ರಮಾಣವಾಗಲಿ ಶಕ್ತ್ಯಾನುಸಾರ ಅಗಿಯಬೇಕು. ಇಲ್ಲಿ ಪುರುಷ ಪ್ರಮಾಣವೆಂದರೆ,— (ಪಂಚಾರ್ತಿರ್ದಶವಿತಸ್ತಿರ್ವಿಂಶತಿಶತಾಂಗುಳಿಃಪುರುಷಃ) ಎಂಬ ಶುಲ್ಬಸೂತ್ರದಪ್ರಕಾರ ಐದು ಹಿಡಿ ಮೊಳಗಳಾಗಲಿ ಹತ್ತು ಚೋಟುಗಳಾಗಲಿ ನೂರಯಿಪ್ಪತ್ತು ಅಂಗುಲಗಳಾಗಲಿ ಪುರುಷ ಪ್ರಮಾಣವೆಂದರಿತು ದೇವರಂ ನಮಸ್ಕರಿಸಿ ಅಗಿದು ನಂತರ ಕೋತಿಯ ತಲಗಾತ್ರವುಳ್ಳ ಕಲ್ಲುಗಳಿಂದಾ ತುಂಬಬೇಕು. ಹೀಗೆಂದು ಮಾಂಡವ್ಯ ಋಷಿಯು ಹೇಳಿರುತ್ತಾರೆ.

ಶ್ಲೋ॥ ಜಲಾಂತಂಪ್ರಸ್ತರಾಂತಂವಾಪುರುಷಾಂತಮಥಾಪಿವ॥ಕ್ಷೇತ್ರಂಸಂಶೋಧ್ಯಚೋದ್ಧೃತ್ಯಶಲ್ಯಂ ಸದನಮಾರಭೇತ್ ॥ ಮತ್ತು ಮತ್ಸ್ಯಪುರಾಣದಲ್ಲಿ. ಶ್ಲೋ ॥ ಕಪಿಶೀರ್ಷಪ್ರಮಾಣೈಶ್ಚ ಗ್ರಾವಭಿಃ ಪೂರಯೇಧ್ಧ್ರುವಂ । ಭಾವಂತತ್ರಸಮುತ್ಕೃತ್ವಾತತಃವಾಚೀಂಪ್ರಸಾದಯೇತ್॥ ಪಾಷಾಣಂಚೇಷ್ಟಕಾವಾಪಿಲೋಹಂವಾಪಿವಿಶೇಷತಃ । ಹಲಾಗ್ರೇಣಸಮುದ್ಭೂತಂಶೋಭನಂಧನಮೇವಚ ॥

ಟೀ॥ಹೀಗೆ ಶೋಧನೆ ಮಾಡುವ ಸಮಯದಲ್ಲಿ ಪಾಷಾಣಗಳಾಗಲಿ ಇಟ್ಟಿಕೆಗಳಾಗಲಿ, ಲೋಹವಾಗಲಿ ಧನವಾಗಲಿ ದೊರೆತರೆ ಶುಭವೆಂದು ತಿಳಿಯತಕ್ಕದ್ದು ಹೀಗೆಂದು ಕಾರಿಕೆಯಲ್ಲಿಯೂ ಹೇಳಲ್ಪಟ್ಟಿಧೆ.

ಶ್ಲೋ॥ ಖನ್ಯಮಾನೇಯದಾಕ್ಷೇತ್ರೇಪಾಷಾಣಃಪ್ರಾಪ್ಯತೆಯದಾ।ಧನಾಯುಶ್ಚಿರತಾತಸ್ಯಚೇಷ್ಟಕಾಸುಧನಾಗಮಃ। ಕಪಾಲಾಂಗಾರಕೇಶಾದೌವ್ಯಾಧಿನಾಪೀಡಿತೋಭವೇತ್ ॥ ಗೋಶೃಂಗಂಕಚ್ಛಪಂಚೈವತಂಡುಲಂದರ್ದುರಂ ತಥಾದೃಶ್ಯಂತೆಖನ್ಯಮಾನೇನ ಶೋಭನಂತತ್ರನಿರ್ದಿಶೇತ್॥ ಟೀ॥ ಭೂಶೋಧನೆ ಮಾಡುವಾಗ ಹಸುವಿನಕೊಂಬಾಗಲಿ ಆಮೆಯಾಗಲಿ-ಮರದ ಬುಡವಾಗಲಿ, ಕಪ್ಪೆಯಾಗಲಿ, ದೊರೆತರೆ ಶುಭವುಂಟಾಗುವುದು. ಶ್ಲೋ॥ಕಾಷ್ಠೇಷ್ವಗ್ನಿಭಯಂ ವಿಂದ್ಯಾಲ್ಲೋಷ್ಟೇಕಲಹಮಾಪ್ನುಯಾತ್।ತುಷೇತುಧನಹಾನಿಸ್ಸ್ಯಾದ್ಭಸ್ಮನಿವ್ಯಾಧಿಮಾದಿಶೇತ್ । ಅಂಗಾರೇತುಭಯಂಮೃತ್ಯೋರಸ್ಥಿ

ನಿಸ್ಯಾತ್ಕುಲಕ್ಷಯಃ । ಸರೀಸೃಪೇಷುಚೋರೇಭ್ಯೋಭಯಮಾದಿಶೇತ್ ॥

ಟೀ॥ ಕಾಗೆಗಳಲ್ಲಿ ಅಗ್ನಿಯಿಂದಾ ಭಯವು, ಹೆಂಚುಗಳಲ್ಲಿ ವಿವಾದವು ಹೊಟ್ಟಿನಲ್ಲಿ ಧನಕ್ಷಯವು, ಬೂದಿಯಲ್ಲಿ ವ್ಯಾಧಿಯು, ಇದ್ದಲಿನಲ್ಲಿ ಮೃತ್ಯುವಿನಿಂದ ಭಯವು, ಯೆಲುವುಗಳಲ್ಲಿ ನಾಶವು, ಹಾವು ಚೇಳುಮೊದಲಾದುವುಗಳಲ್ಲಿ ಕಳ್ಳರ ದೆಸೆಯಿಂದ ಭಯವೂ ವುಂಟಾಗುತ್ತೆಂದು ತಿಳಿಯತಕ್ಕದ್ದು ಅದ್ದರಿಂದ ಈ ಪದಾರ್ಥಗಳು ಭೂಶೋಧನೆಯ ಸಮಯದಲ್ಲಿ ಶಿಕ್ಕಿದರೆ ಯೆಲ್ಲವುಗಳಂ ಪರಿಹರಿಸಿ ಬ್ರಾಹ್ಮಣರಿಂದಾ ಆ ಸ್ಥಳದಲ್ಲಿಪುಣ್ಯಾಹವಾಚನೆಯಂ ಮಾಡಿಸಿ ದಕ್ಷಿಣೆ ತಾಂಬೂಲಾದಿಗಳಿಂದ ಸತ್ಕರಿಸಿ ಅವರಿಂದಾದೋಷವು ನಿವೃತ್ತಿಯಾಗಿದೆ ಎಂಬಮಾತು ಪರಿಗ್ರಹಿಸಿ ಶುದ್ಧ ಮೃತ್ತಿಕೆಯಿಂದ ಅಧಿಷ್ಠಾನವಂ ಮಾಡಬೇಕು.

## ಅ ಷ್ಟ ಕ ವ ರ್ಗ ಫ ಲ.

ಶ್ಲೋ॥ ಕ್ಷೇತ್ರಸ್ಯಾಷ್ಟಾಃಕ್ರಮಾತ್ತ್ವಯಶಾವರ್ಗಾಸ್ಯುರಷ್ಟಾಸ್ಥಿತಾಃಪ್ರಾಗಾದೌಖಗರಾಡ್ಬಿಡಾಲಮೃಗರಾಟ್ಛ್ವಾಹ್ವಾಖುನಾಗಾಶ್ವಶಃ । ಸ್ವಾದ್ವರ್ಗಾದ್ಯದಿಪಂಚಮೋರಿರ[illegible]ದಿಗ್ವರ್ಗ್ಗೇಷುಯೋನಿ[illegible]ಂ ದ್ವಾ[illegible]ಷ್ಟುವಿ[illegible]ಷ್ಟುಚೈಕಮಖಿಲಂಮೇಷಾದಿಪೂರ್ವಾಗ[illegible]ತಃ ॥

ಟೀ॥ ತಾನು ತೆಗದುಕೊಂಡ ಭೂಮಿಯಲ್ಲಿ ಯಾವ ಕಡೆ ಗೃಹವಂಕಟ್ಟಬೇಕೋ ಅದಂ ತಿಳಿಸುತ್ತಾನೆ. ಅ-ಕ-ಚ-ಟ-ತ-ಪ-ಯ-ಶ ಎಂಬ ಎಂಟುವರ್ಗಗಳಿಗೂ ಕ್ರಮವಾಗಿ ಅಕಾರ ಮೊದಲು ಅಂ ವರಿವಿಗೂ ೧೬ ಅಕ್ಷರಗಳಿಗೂ ಗರುಡನು, ಕಖಗಘಙ ಈ ಐದು ಅಕ್ಷರಗಳಿಗೂ ಬೆಕ್ಕು, ಚಛಜಝಞ ಈ ಐದಕ್ಷರಗಳಿಗೂ ಸಿಹ್ಮವು, ಟಠಡಢಣ ಈ ಐದಕ್ಷರಗಳಿಗೂ ನಾಯಿಯೂ, ತಥದಧನ ಈ ಐದಕ್ಷರಗಳಿಗೂ ಇಲಿಯೂ, ಯರಲವ ಈ ನಾಲ್ಕಕ್ಷರಗಳಿಗೂ ಮೊಲವೂ, ಅಧಿಪತಿಗಳಾಗಿ ಇರುತ್ತವೆ. ಪ್ರತಿವರ್ಗಕ್ಕು ೫ನೇ ವರ್ಗವು ಶತ್ರುವಾದ್ದರಿಂದ ಅಂದರೆ,—ಅವರ್ಗಕ್ಕೆ ಅಧಿಪತಿಯು ಗರುಡನು ಅದಕ್ಕೆ ೫ ನೇದಾದ ತವರ್ಗಕ್ಕೆ ಅಧಿಪತಿಯು ಸರ್ಪವೂ ಇವೆರಡು ವೈರವುಳ್ಳದ್ದು ಆದ್ದರಿಂದ ತನ್ನ ನಾಮಾದ್ಯವರ್ಣವು ಯಾವ ವರ್ಗದಲ್ಲಿ ಶೇರಿದೆಯೋ ಅದಕ್ಕೆ ವೈರಿವರ್ಗದ ದಿಕ್ಕಿನಲ್ಲಿ ಮನೆಯನ್ನು ಕಟ್ಟಬಾರದು, ಆದರೆ ತನ್ನ ವರ್ಗವು ಅಧಿಕ್ಯವಾದ್ದಾಗಿದ್ದರೆ ಕಟ್ಟಬಹುದು, ಅಂದರೆ ಸಿಹ್ಮ ವರ್ಗದ

ವರು ಗಜವರ್ಗದ ಮೇಲೆ ಕಟ್ಟ ಬಹುದು. ಗಜವರ್ಗದವರು ಸಿಂಹ್ವವರ್ಗದ ಮೇಲೆ ಕಟ್ಟಬಾರದು. ಅಥವಾ ಮೇಷಾದಿ ದ್ವಾದಶ ರಾಶಿಗಳನ್ನು ದಿಕ್ಕುಗಳಲ್ಲಿ ಎರಡೆರಡಾಗಿಯೂ ಮೂಲೆಗಳಲ್ಲಿ ಒಂದೊಂದಾಗಿ ಬರೆಯಬೇಕು. ಇದರ ಕ್ರಮ ಕೆಳಗಿನ ಶ್ಲೋಕದಲ್ಲಿ ಹೇಳಿದೆ.

ಶ್ಲೋ॥ ಏಕಸ್ಮಿನ್ಯದಿಪಂಚಮೇಚನವಮೇಸ್ಯಾದ್ಬಂಧುಸಂರಕ್ಷಕೋ
ನಾಶಸ್ಸ್ಯಾದ್ದ್ವಿತಯೇಚಷಷ್ಟದಶಮೇಚೇನ್ನಾಮರಾಶ್ಯಾದಿತಃ ।ತಾ
ರ್ತೀಯೇಯದಿಸಪ್ತಮೇವರಜನ್ಯೈಃ ಪೋಷ್ಯಸ್ತ್ವದ್ಯೈಕಾದಶೇಚಾತು
ರ್ಥೇಚಸಘಾತುಕೋಗೃಹಪತೆಸ್ಥಾಯ್ಯಷ್ಟಮೇದ್ವಾದಶೇ॥

ಟೀ॥ ಪೂರ್ವದಲ್ಲಿ ಹೇಳಲ್ಪಟ ರಾಶಿಚಕ್ರಕ್ಕೆ ತನ್ನ ಹೆಸರಿನ ಅಕ್ಷರದರಾಶಿ ಮೊದಲು ಪಂಚಮ ನವಮರಾಸಿಗಳ ದಿಕ್ಕುಗಳಲ್ಲಿ ಮನೆ ಕಟ್ಟಿದರೆ ಬಂಧು ಪೋಷಕನಾಗುವನು, ದ್ವಿತೀಯ ಷಷ್ಟ ದಶಮುಗಳಲ್ಲಿ ನಾಶಹೊಂದುವನು, ತೃತೀಯ ಸಪ್ತಮ ಏಕಾದಶ ಸ್ಥಾನಗಳಲ್ಲಿ ಮನೆ ಕಟ್ಟಿದರೆ ಎರಡನೇಯವರಿಂದ ಪೋಷಿಸಲ್ಪಡುವನು, ಚತುರ್ಥ ಅಷ್ಟಮ ದ್ವಾದಶಗಳಲ್ಲಿ ವಾಸ ಮಾಡಿದರೆ ಒಬ್ಬರಿಗೆ ತಾನು ಹಾನಿಮಾಡುವನಾಗುವನು.

## ಮತಾಂತರ ದ್ವಾದಶ ವರ್ಗಕ್ರಮ.

ಶ್ಲೋ ॥ ಮೀನಾದಿಕುಂಭಪರ್ಯಂತ ಮೀಶಾನ್ಯಾದಿಕ್ರಮಾತ್ತಥಾ ।
ಯತ್ರಯಸ್ಮಿನ್ಸ್ಥಿತೆರಾಶೌತತ್ರತತ್ರಾದಿಗಣ್ಯತೆ ॥

ಟೀಕು ॥ ತಾನು ತೆಗದುಕೊಂಡ ಭೂಮಿಯನ್ನು ೧೬ ಭಾಗಮಾಡಿಮೀನರಾಶಿ ಮೊದಲಾಗಿ ಕುಂಭಪರ್ಯಂತವೂ ಈಶಾನ್ಯ ಕ್ರಮವಾಗಿ ೧೨ ರಾಶಿಗಳಲ್ಲಿ ಬರೆದು ತನ್ನರಾಶಿ ಯಾವದಿಕ್ಕಿನಲ್ಲಿ ಇಥೆಯೋ ಅದೇದಿಕ್ಕಿನಲ್ಲಿ ಮನೆ ಕಟ್ಟಬರೆ ಉತ್ತಮವಾಗಿರುವದು. ಮಧ್ಯೆ ಇರುವ ನಾಲ್ಕು ಭಾಗಗಳು ಬ್ರಹ್ಮಸ್ಥಾನವೆಂದು ತಿಳಿಯುವದು.

ಶ್ಲೋ॥ ಏಕಪಂಚನವಬಂಧರಕ್ಷಕೇತ್ರೀಣಿರುದ್ರಮುನಿಭಿಸುಯಾಚಕ
ನೇತ್ರಷಷ್ಟದಶಮಸ್ತುದ್ವಾದಶಾಷ್ಟ ಚತುರಸ್ತುನಾಶಕ ॥

ಟೀ ॥ ತನ್ನರಾಶಿಗೆ ೧—೫—೯ ಈ ರಾಶಿಗಳಲ್ಲಿ ಮನೆ ಕಟ್ಟಿದರೆ ಬಂಧುಪೋಷಕನಾಗುವನು, ೩=೧೧-೭ ಈ ರಾಶಿಗಳಲ್ಲಿ ಯಾಚಕನಾಗುವನು ೨-೬-೧೦ ಈ ರಾಶಿಗಳಲ್ಲಿ ಹಿಂಸಕನಾಗುವನು. ೧೨-೮=೪ ಈರಾಶಿಗಳ್ಲಲಿ

ಳಲ್ಲಿಯೂ ಮಧ್ಯೆಯಿರುವ ४-ಭಾಗಗಳಲ್ಲಿಯೂ ಮನೆ ಕಟ್ಟಿದರೆ ಮರಣ ವುಂಟಾಗುವದು.

## ಬ್ರ ಹ್ಮ ಸ್ಥಾ ನ ದ ಫ ಲ.

ಶ್ಲೋಕ॥ ವೃಷಭೋಮಿಥುನಶ್ಚೈವ ಸಿಹ್ಮೋಮೃಗಚತುಷ್ಟಯಃ।
ಬ್ರಹ್ಮಸ್ಥಾನೇಧೃವಂಮೃತ್ಯುರನ್ಯಸ್ಥಾನೇಶುಭಾವಹಃ॥

ಟೀ॥ ವೃಷಭ, ಮಿಥುನ, ಸಿಹ್ಮ, ಮಕರ ಈ ४ ರಾಶಿಗಳವರೂ ಮಧ್ಯೆ ಇರುವ ಬ್ರಹ್ಮ ಸ್ಥಾನವಾದ ನಾಲ್ಕು ಭಾಗಗಳಲ್ಲಿ ಮನೆಕಟ್ಟಬಾರದು. ಮಿಕ್ಕ ಭಾಗಗಳಲ್ಲಿ ಶುಭಕರವಾಗುವದು ಅಂದರೆ,—ಈ ರಾಶಿಗಳವರು ಮಧ್ಯಭಾಗದಲ್ಲಿ ಕಟ್ಟಿದರೂ ದೋಷವಿಲ್ಲವೆಂದು ತೋರುತ್ತೆ.

## ಘಾ ತ ಲ ಕ್ಷ ಣ.

ಶ್ಲೋ॥ ಪ್ರಸಾದಂಪರಿಘಾತಂಚಪರಿಕ್ಷಿಪ್ತಾನಿಯಾನಿಚ। ಪ್ರದಕ್ಷಿ ಣಂಪ್ರಶಂಸಂತಿಅಪಸವ್ಯಂನಕಾರಯೇತ್॥

ಟೀ॥ ಕೋಟೆಗಳ ಕಟ್ಟುವಾಗಲು ಪ್ರಾಕಾರಗಳ ಮಾಡುವಾಗಲೂ ಅಗೆ ತ್ತಿಗಳನ್ನು ತೆಗೆಯುವಾಗಲೂ, ಗೋಡೆಗಳನ್ನು ಹಾಕುವಾಗಲೂ, ಇಟ್ಟಿಗೆ ಕೆಲಸ ಮಾಡುವಾಗಲು, ಬಿಡುವುಗಳು ಗುಣಾವರ್ತವು ಸಹಾ ಪ್ರದಕ್ಷಿಣ ಕ್ರಮವಾಗಿ, ತೆಗೆಯಬೇಕು. ಅಪಸವ್ಯವಾಗಿ ಮಾಡಿದರೆ, ಆ ಮನೆಯ ಯ ಜಮಾನನಿಗೆ ಶುಭಕಾಲಗಳಲ್ಲಿ ವಿಘ್ನಗಳುಂಟಾಗುವವು.

## ಪ್ರಾ ಚೀ ಸಾ ಧ ನೆ.

ಶ್ಲೋ॥ ಶಂ[illegible]ತೋದ್ವಿಗುಣಂಸೂತ್ರಂಮಂಡಲಂಪರಿವೇಷ್ಟಿತಂ।ಮ ಧ್ಯೇಶಂಕುಂವಿನಿಕ್ಷಿಪ್ಯಛಾಯಾಚೋಪರಿಲಕ್ಷ್ಯತೆ। ಯೇನಾವಿಶತಿ ಸಾಚ್ಛಾಯಾಚೋಕ್ತಾಮಾರ್ಗೇಣನಾಪರೆ। ಶಂಕುಂಕುರ್ಯಾತ್ಪ್ರಾಚಿ ತಿಚಮಧ್ಯಮಾರ್ಗೇಣಸಾಧನಂ॥

ಟೀ॥ ತನಗೆ ಬೇಕಾದಷ್ಟು ಶಂಕುವನ್ನು ಮಾಡಿಕೊಂಡು ಅದರ ಯರಡ ರಷ್ಟು ಸೂತ್ರವನ್ನು ತೆಗೆದು ಅದರಿಂದ ಮಂಡಲಾಕೃತಿಯಾಗಿ ಗೆರೆಯೆ ಳೆದು ಅದರ ಮಧ್ಯದಲ್ಲಿ ಈ ಶಂಕುವನ್ನು ಸ್ಥಾಪಿಸಿ ಪ್ರಾತಃಕಾಲದಲ್ಲಿ ಶಂ ಕುವಿನ ನೆರಳು ಪಶ್ಚಿಮಕಡೆ ಬೀಳುವದು. ಅಲ್ಲಿ ಗುರ್ತುಮಾಡಿ ಅದೇ ಪ್ರ ಕಾರವೇ, ಸಾಯಂಕಾಲದಲ್ಲಿ ಪೂರ್ವದಕಡೆ ಗುರ್ತುಮಾಡಿ, ಅನಂತರ ಈ ಎರಡು ಗುರ್ತುಗಳ ಮೇಲೂ ಪುನಃ ಮಂಡಲಾಕೃತಿಯಾಗಿ, ಗೆರೇ ಯೆಳೆದ ರೆ ದಕ್ಷಿಣೋತ್ತರ ಮತ್ಸ್ಯರೇಖೆ ಏರ್ಪಡುವದು. ಪೂರ್ವ ಪಶ್ಚಿಮ ಗುರ್ತು

ಗಳ ಮೇಲೆ ತನಗೆ ಬೇಕಾದಷ್ಟು ದೂರ ಸೂತ್ರ ಹಿಡಿದರೆ ಪೂರ್ವ ಪಶ್ಚಿಮ ಗಳು ಗೊತ್ತಾಗುವವು ಮತ್ಸ್ಯರೇಖೆಯಮೇಲೆ ಸೂತ್ರ ಹಿಡಿದರೆ, ದಕ್ಷಿಣೋತ್ತರಗಳು ಗೊತ್ತಾಗುವವು ಶಂಕುವಿನ ಮಂಡಲ ರೇಖೆಗಿಂತಲೂ ಬಿಂದುವಿನ ಮಂಡಲ ರೇಖೆಗಳು ಸ್ವಲ್ಪ ದೊಡ್ಡದಾಗಿರಬೇಕು.

ಶ್ಲೋ॥ ದಿಗ್ಗತಂಮಂದಿರಂಕಾರ್ಯಂತದ್ವಾರಂತುವಿಶೇಷತಃ । ವಿದಿಗ್ಗತಂಗೃಹಂದ್ವಾರಂಸರ್ವದೋಷಕರಂಭವೇತ್ ॥

ಟೀ॥ ಗೃಹವನ್ನಾಗಲಿ, ದ್ವಾರವನ್ನಾಗಲಿ, ಸರಿಯಾದ ದಿಕ್ಕುಗಳಲ್ಲಿ ಕಟ್ಟಬೇಕು ಹಾಗಿಲ್ಲದೆ ಮನೆಗಳಂ ಕಟ್ಟಿದರೆ ಸಮಸ್ತ ದೋಷಗಳು ಸಂಭವಿಸುವವು ಆದುದರಿಂದಾ ಪ್ರಾಚೀಸಾಧನೆಯನ್ನು ಅವಶ್ಯಕವಾಗಿ ಮಾಡಬೇಕು.

ಶ್ಲೋ॥ ಸೂರ್ಯಾದಿಗ್ರಹತಾರಾಣಾಮುದಯೊನೈವಲಕ್ಷ್ಯತೆ।ಪೂರ್ವಾದಿಕಕುಭಾಂಮಧ್ಯೆ ವಿನಾಪ್ರಾಚ್ಯಾಸ್ತುಸಾಧನಂ ॥

ಟೀ॥ ಸೂರ್ಯ ಚಂದ್ರ ಮುಂತಾದ ಗ್ರಹಗಳು ಮತ್ತು ನಕ್ಷತ್ರಗಳ ಉದಯವು ಪೂರ್ವಾದಿ ದಿಕ್ಕುಗಳ ಮಧ್ಯದಲ್ಲಿ ಆಗುವದರಿಂದ ಅಂದರೆ,-ಉತ್ತರಾಯಣ ದಕ್ಷಿಣಾಯನಗಳಲ್ಲಿ ಸೂರ್ಯಾದಿ ಗ್ರಹಗಳ ಉದಯವು ಮೂಲೆಗಳಲ್ಲಿ ಆಗುವುದರಿಂದ ಪ್ರಾಚೀನಸ್ಥಾಪನೆವಿನಾ ದಿಕ್ಕುಗಳು ಏರ್ಪಡತಕ್ಕದ್ದಿಲ್ಲವು

ಶ್ಲೋ॥ ಮೃಗೇಕೀಟೇಯದಾಭಾನುರುದಿತಶ್ಚಾಗ್ರಯಾವಿಶೇತ್ । ದ್ವಾರಂಕೃತಂವಿದಿಕ್ಸ್ಥೈನಮುಖಂಭವತಿನಿಶ್ಚಯಂ ॥ ಮೇಷೇಚೈವತುಲಾಯಾಂಚ ಪ್ರಾಚೀದಿಕ್ಸ್ಪಷ್ಟಂಭವೇತ್ ॥ ತಸ್ಮಾತ್ಪ್ರಾಚೀಂಸಮಾಸಾದ್ಯದ್ವಾರಂಕುರ್ಯಾದ್ವಿಚಕ್ಷಣಃ ॥

ಟೀ॥ ಮಕರ ಮಾಸದಲ್ಲಿಯೂ, ವೃಶ್ಚಿಕ ಮಾಸದಲ್ಲಿಯೂ, ಸೂರ್ಯನು ಉದಯವಾಗಿ ಬಾಗಿಲಿನಲ್ಲಿ ಬಿಸಿಲು ಸರಿಯಾಗಿ ಬಿದ್ದರೆ,—ಆ ದ್ವಾರವುಮೂಲೆಗಳಲ್ಲಿ ಇದೆಯೆಂತಲೇ ತಿಳಿಯಬೇಕು.ಮೇಷಮಾಸದಲ್ಲಿಯೂ ತುಲಾಮಾಸದಲ್ಲಿಯೂ, ಸೂರ್ಯೋದಯವಾದರೆ ಅದೇ ಸರಿಯಾದ ಪೂರ್ವದಿಕ್ಕೆಂದು ತಿಳಿಯತಕ್ಕದ್ದು. ಆದ್ದರಿಂದಲೇ, ಪ್ರಾಚೀಸಾಧನೆಯನ್ನು ಅವಶ್ಯವಾಗಿ,ಮಾಡುವದನ್ನು ಮಾಡಬೇಕು, ಮೇಲೆ ಹೇಳಿರುವ ಶ್ಲೋಕವಲ್ಲಿ ಸೂರ್ಯೋದಯವನ್ನು ನೋಡಿ ಪ್ರಾಚೀ ಸಾಧನೆ ಹೇಳಲ್ಪಟ್ಟಿದೆ ಗ್ರಂಥಾಂತರಗಳಲ್ಲಿ

ನಕ್ಷತ್ರೋದಯದಿಂದಾತಿಳಿಸಲ್ಪಟ್ಟ, ಪ್ರಕಾರವು ಇಲ್ಲಿ ಬರೆಯುತ್ತೇನೆ, ದೇವಯಜನದೀಪಿಕೆಯಲ್ಲಿ

ಶ್ಲೋ ॥ ಚಿತ್ರಾಸ್ವಾತ್ಯಂತರೇಶಿಶ್ರೋಣಾದ್ದಕ್ಷಿಣಾನಥವಾಸಿನಾಂ ।
ಪ್ರಾಚೀತುಕೃತ್ತಿಕಾತ್ ಜ್ಞೇಯಾಪ್ಯುತ್ತರಾ ಪಥವಾಸಿನಾಂ ॥
(ಶುಲ್ಬವು) ಕೃತ್ತಿಕಾಶ್ರವಣಾಪುಷ್ಯಂಚಿತ್ರಾಸ್ವಾತ್ಯೋರ್ಯದಂತರಂ।
ಏತತ್ಪ್ರಾಚ್ಯಾದಿಶೋರೂಪಂ ಯುಗಮಾತ್ರೋದಿತೇಷ್ವರಃ ॥ ಇದರಕ್ರಮವ್ಯಾಗಂದರೆ,—ಉಜ್ಜಯಿನೀ ಪಟ್ಟಣಕ್ಕೆ ದಕ್ಷಿಣ ಕಡೆ ದೇಶಗಳಲ್ಲಿರತಕ್ಕವರೆಲ್ಲಾ, ಚಿತ್ರಾ ಸ್ವಾತೀ ನಕ್ಷತ್ರಗಳ ದೆಸೆಯಿಂದಾ ಸಾಧನ ಮಾಡಬೇಕು. ಉತ್ತರ ಕಡೆ ದೇಶದವರೆಲ್ಲಾ, ಕೃತ್ತಿಕೆ ಶ್ರವಣ ಪುಷ್ಯ ಇವುಗಳ ದೆಸೆಯಿಂದಾತಿಳಿಯಬೇಕು. ಹ್ಯಾಗಂದರೆ,—ಮೋಡವಿಲ್ಲದೆ ಪ್ರಕಾಶವಾಗಿರುವ ರಾತ್ರಿಹೊತ್ತಿನಲ್ಲಿ ಮೂಡಲು ಮುಖವಾಗಿ, ಕುಳಿತುಕೊಂಡು ೮೬ ಅಂಗುಲ ಪ್ರಮಾಣದಲ್ಲಿ ವುದಯವಾಗಿರುವ ಚಿತ್ರಾ ನಕ್ಷತ್ರವನ್ನು ಒಂದು ಕೊಳವಿಯರಂಧ್ರದಲ್ಲಿ ನೋಡಿ, ಅದರ ಕೊನೆಯಿಂದಾ ಭೂಮಿ ಸೋಕುವಹಾಗೆ ಗುಂಡು ಕಟ್ಟದ ದಾರವನ್ನು ಬಿಟ್ಟು ಅಲ್ಲಿಗುರ್ತುಮಾಡಿ ಹಾಗೆಯೇ ಕದಲದೆ ಸ್ವಾತಿಯನ್ನು ನೋಡಿ, ಪೂರ್ವದಂತೆ ಗುರ್ತುಮಾಡಿ, ತನ್ನ ಕಣ್ಣಿರುವ ಕಡೆಯಿಂದ ದಾರವಂ ಬಿಟ್ಟು ಅಲ್ಲಿ ಗುರ್ತುಮಾಡಲಾಗಿ, ಎರಡು ಗುರ್ತುಗಳಾಗುವವು, ಆನಂತರ ಚಿತ್ರಾ ಸ್ವಾತಿ, ಚಿನ್ಹೆಗಳಿಗೆ ಸರಿಯಾದ ದಾರವನ್ನು ಬಿಟ್ಟು ಅದರ ಎರಡು ಕೊನೆಗಳು ಸೇರಿಸಿ, ಆ ಮಧ್ಯದಲ್ಲಿ ಗುರ್ತುಮಾಡಿ ಅಲ್ಲಿ ಶಂಕುವನ್ನು ಸ್ಥಾಪಿಸಿ ಅದರ ದೆಸೆಯಿಂದ ಪಶ್ಚಿಮ ದಿಕ್ಕಿನ ಗುರ್ತು ಪರ್ಯಂತವೂ ಸೂತ್ರಹಿಡಿದರೆ ಅದೆ ಪ್ರಾಚೀಸೂತ್ರವಾಗುವದು. ಹೀಗೆಯೇ ಉಜ್ಜಯಿನೀಗೆ ಉತ್ತರಕಡೆಯವರು ೮೬ ಅಂಗುಲಪ್ರಮಾಣದಲ್ಲಿ ಉದಯಿಸಿರುವ ಕೃತ್ತಿಕಾ ನಕ್ಷತ್ರವನ್ನು ನೋಡಿ, ಆಕೊಳವಿಯ ಬುಡದ ದೆಸೆಯಿಂದಲೂ ಕೊನೆದೆಸೆಯಿಂದಲೂ ಭೂಮಿಪರ್ಯಂತ ದಾರಬಿಟ್ಟು ಎರಡು ಕಡೆಯಲ್ಲಿಯೂ, ಗುರ್ತುಗಳು ಮಾಡಿ, ಆ ಎರಡು ಬಿಂದುಗಳಮೇಲೂ ಸೂತ್ರಹಿಡಿದರೆ,—ಪ್ರಾಚೀಸೂತ್ರವಾಗುವದು. ಈಪ್ರಕಾರಹೇಳಿ ಎಲ್ಲಾ ದೇಶದವರಿಗೂ ಧ್ರುವನಕ್ಷತ್ರದಿಂದ ಪ್ರಾಚೀಸಾಧನೆ ಹೇಳುತ್ತಾನೆ, ಸ್ಫುಟಿಕರಣದಲ್ಲಿ ಶ್ಲೋ ॥ ಧ್ರುವಲಂಬಕರೇಖಾಯಾರೇಖಾಂ

ಶಸ್ಸಾನ್ಯಾಯಾಮ್ಯಹರಿತಾಸ್ತು॥ ತಸ್ಮೆಶ್ಚಪುಚ್ಛ ಮುಖತಃ ಪಶ್ಚಿಮ

ಪೂರ್ವಾಭಿದೋವಿಂಧ್ಯಾತ್ ||

ಪೂರ್ವಹೇಳಿದ ಪ್ರಕಾರ ಕೊಳವಿಯ ದೆಸೆಯಿಂಧಾ ಧೃವನಕ್ಷತ್ರವನ್ನು ನೋಡಿ, ಆದ್ಯಂತಗಳಲ್ಲಿ ಗುರ್ತುಮಾಡಿ, ಸೂತ್ರಹಿಡಿಯಲು ಉತ್ತರ ದಕ್ಷಿಣ ದಿಕ್ಕುಗಳೇರ್ಪಡುವವು, ಆಬಿಂದುಗಳ ಮೇಲೆ, ಮೊದಲು, ಹೇಳಿಗ ಪ್ರಕಾರ ಮತ್ಸ್ಯರೇಖೆ ಹುಟ್ಟಿಸಲು ಪೂರ್ವ ಪಶ್ಚಿಮಗಳಾಗುವವು, ಅಥವಾ ಈ ಕಾಲದಲ್ಲಿ ಪ್ರಸಿದ್ಧವಾಗಿರುವ ಉತ್ತರಮುಖಿಯೆಂಬ ಯಂತ್ರವನ್ನು ಈ ಪ್ರಮಾಣಕ್ಕೆ ಸರಿಮಾಡಿಕೊಂಡು ನೇತಾಡಿದರೆ, ಯಲ್ಲಾ ಕಾಲದಲ್ಲಿಯೂ ಸುಲಭಲಾಗಿ, ಪ್ರಾಚೀನಾಧನೆ ಯಾಗುವದು. ವೃದ್ಧನಾರದನು:-ಪ್ರಸಾದೆ ಸದನೇವಿಂದೇದ್ವಾರೇಕುಂಡೇವಿಶೇಷತಃ | ದಿಙ್ಮೋಢೇಕುಲನಾಶನ್ಸ್ಯಾತ್ತ್ನಾಕ್ರತ್ಸಂನಾಧಯೇದ್ದಿಶಃ || ದೇವಸ್ಥಾನ ಗೃಹದ್ವಾರ ಹೋಮಕುಂಡ ಇವುಗಳಲ್ಲಿ ಅಗತ್ಯವಾಗಿ, ಪ್ರಾಚೀಸಾಧನೆ ಮಾಡಬೇಕು. ಹಾಗಿಲ್ಲದೆ ದಿಙ್ಮೂಢವಾದರೆ ಕುಲನಾಶನವಾಗುವದು.

## ಪುರದ್ವಾರಲಕ್ಷಣ.

ಶ್ಲೋ || ಸಪ್ತಹಸ್ತಂಪುರದ್ವಾರಂ ವಿಸ್ತಾರಂತುತಥೋಚಿತಂ | ವೇಶ್ಮದ್ವಾರಂ ಪಂಚಹಸ್ತಂ ಷೋಡಶಾಂಗುಳವರ್ಜಿತಂ ||

ಟೀ || ಪಟ್ಟಣದ ಬಾಗಿಲು ಉದ್ದ ೭ ಕೈಗಳು ತಲೆ ಬಾಗಲು ೧೬ ಅಂಗುಳ ಕಡಮೆಯಾಗಿ, ೫ ಕೈಗಳ ಉದ್ದವು ೫ ಕೈಗಳ ಅಗಲವೂ ಮಾಡಬೇಕು.

ಶ್ಲೋ || ಅಶ್ವಾರೂಢೆಸಮಾಯಾತತಸ್ಯೋಪರಿತಥೊಛ್ರಯಂ | ಹಸ್ತಮಾತ್ರಪ್ರಮಾಣೇನದ್ವಾರಂಕುರ್ಯಾದ್ವಿಚಕ್ಷಣಃ ||

ಟೀ || ಕುದುರೆ ಹತ್ತಿ ಬರುವವನ ತಲೆಯಮೇಲೆ ಕೈಯುದ್ದ ಪ್ರಮಾಣವಿರುವಹಾಗೆ, ಪಟ್ಟಣದ್ವಾರವನ್ನು ಮಾಡಬೇಕು.

## ಚೋರಖಂಡಿದ್ವಾರಲಕ್ಷಣ.

ಶೋ || ದಿಕ್ಷುವಾಕೋಣದೇಶನ್ವಾಹ್ಯಪರಿಷ್ಠೆಧವಾಪ್ಯಧಃ | ಅಲಕ್ಷಣಂವಾಗುಪ್ತಂಚದ್ವಾರಂನ್ಸ್ಯಾಚ್ಚೋರಖಂಡಿತಂ ||

ಟೀ || ಪೂರ್ವಾದಿ ದಿಕ್ಕುಗಳಲ್ಲಾಗಲಿ, ಅಗ್ನೇಯಾದಿ ಕೋಣಗಳಲ್ಲಾಗಲಿ. ಕೆಳಗಾಗಲಿ, ಲಕ್ಷಣವಿಲ್ಲದೇ ಇರಲಿ ಹ್ಯಾಗಾದರೂ ರಹಸ್ಯವಾಗಿರುವಹಾಗೆ ಆಪತ್ತು ಸಂಭವಿಸಿದಾಗ ಪಲಾಯನವಾಗುವದಕ್ಕೆ ಯೋಗ್ಯವಾ

ಗಿಚೋರಖಂಡಿತ ದ್ವಾರವಂ ಮಾಡಬೇಕು. ಈಮುಂತಾದ್ದು ಪುರುಷವಾ ಸುವಿನಲ್ಲಿ ಹೇಳಲ್ಪಡುತ್ತೆ. ಮ ನೆ ಗ ಳಿ ಗೆ ದ್ವಾ ರ ನಿ ರ್ಣ ಯ

ಶ್ಲೋ॥ ದ್ವಾರಂಚತುರ್ವಿಧಂಪ್ರೋಕ್ತಂವಾಸ್ತುಸಂಕ್ರಾಂತಿಭಾವಜಂ
ಕೃತ್ವಾಚಾನ್ಯತಮಂಮುಖ್ಯಂಗವಾಕ್ಷಾದ್ಯೈಃಪರಾಣಚ ॥

ಟೀ॥ ಮನೆಗಳಿಗೆ ದ್ವಾರವಂ ಮಾಡುವದರಲ್ಲಿ ವಾಸ್ತುಪುರುಷನ ಸ್ಥಿತಿಯನ್ನೆ ನುಸರಿಸಿಯೂ ಸಂಕ್ರಾಂತಿಗಳನ್ನನುಸರಿಸಿಯೂ ಗೃಹಪತಿಯ ರಾಶಿಯ ನ್ನನುಸರಿಸಿಯೂ ಮನೆಯ ಆಯಗಳನ್ನನುಸರಿಸಿಯೂ ನಾಲ್ಕು ಪ್ರಕಾರ ವಾಗಿರುವದು. ಮುಖ್ಯವಾದ ದ್ವಾರವನ್ನು ಈ ಪ್ರಕಾರ ಮಾಡಿ ಮಿಕ್ಕಾದ ವೆಲ್ಲಾ ಗವಾಕ್ಷಿ ಮೊದಲಾದವುಗಳಿಂದಾ ಮಾಡಬಹುದು.

ಶ್ಲೋ॥ ಶೇತೇಭಾದ್ರಪದಾತ್ತ್ರಿಷುತ್ರಿಷುಸುರಃಪ್ರಾಗಾದಿಶೀರ್ಷೋ
ತ್ರಹಿಪ್ರೋಕ್ತಂಸದಾಮುಖಂತುಗೋಕ್ಷ್ಯಜ[illegible] ಪೃಷ್ಠೇಯಮೋದಿ
ಜ್ಮುಖಂ। ಹ್ಯಥ್ರೋಗ್ಯೃಣಕುಳೀರಗೇಯುಗರವೌಪೂರ್ವಾಪರಾಸ್ಯಂಗೃಹಂ
ನಾನ್ಯಸ್ಥೆಭುಜಕೋಟಿಘಾತಇಭ್ಯ[illegible]ಹಂಸ್ತ್ರರಾಯಾಃಕ್ರಮಾತ್ ॥

ಟೀ॥ ವಾಸ್ತುಪುರುಷನು ಭಾದ್ರಪದ್ರ, ಆಶ್ವಿಜ, ಕಾರ್ತೀಕ, ಈ ಮೂರು ಮಾಸಗಳಲ್ಲಿ ಪೂರ್ವಶಿರಸ್ಸಾಗಿಯೂ, ಮಾರ್ಗಶಿರ, ಪುಷ್ಯ, ಮಾಘ, ಈ ಮೂರು ಮಾಸಗಳಲ್ಲಿ ದಕ್ಷಿಣ ಶಿರಸ್ಸಾಗಿಯೂ, ಫಾಲ್ಗುಣ, ಚೈತ್ರ, ವೈಶಾಖ ಈಮೂರುಮಾಸಗಳಲ್ಲಿ ಪಶ್ಚಿಮಶಿರಸ್ಸಾಗಿಯೂ, ಜ್ಯೇಷ್ಠ, ಆಷಾಢ, ಶ್ರಾವಣ ಈ ಮೂರು ಮಾಸಗಳಲ್ಲಿ ಉತ್ತರಶಿರಸ್ಸಾಗಿಯೂ ಮಲಗಿರುವನಾದುದ ರಿಂದ ಆಯಾ ಮಾಸಗಳಲ್ಲಿ ಆಯಾ ದಿಕ್ಕಿನಲ್ಲಿ ದ್ವಾರವನ್ನು ಮಾಡಬೇಕು. ಹೀಗೆ ವಾಸ್ತುಪುರುಷನ ಸ್ಥಿತಿ ದ್ವಾರನಿರ್ಣಯ ಹೇಳಿ ಸಂಕ್ರಾಂತಿಯ ನ್ನನುಸರಿಸಿ ಹೇಳುತ್ತಾನೆ. ಸೂರ್ಯನು (ವೃಷಭ, ಮೇಷ, ತುಲಾ, ಈ ರಾಶಿಗಳಲಿರುವಾಗ ದಕ್ಷಿಣ ಮುಖವಾಗಲಿ ಉತ್ತರ ಮುಖವಾಗಲಿ, ಪಶ್ಚಿಮ ಮುಖವಾಗಲೀ) ಮಾಡಬಹುದು. ಇತರ ರಾಶಿಗಳಲ್ಲಿರುವಾಗ ಗೃಹವನ್ನು ಕಟ್ಟಬಾರದು. ಇನ್ನು ಆಯುವನ್ನನುಸರಿಸಿ ದ್ವಾರನಿರ್ಣಯ ಹೇಳಲು ಆಯನಾಥನವಂ ಹೇಳುತ್ತಾರೆ. ಮನೆಯ ಉದ್ದವೂ ಅಗ ಲವೂ ಗುಣಾಕಾರಮಾಡಿ ೮ ರಿಂದ ಭಾಗಿಸಲು ಧ್ವಜಾದ್ಯಾಯಗಳಾಗುವವು.

ಇದರ ಕ್ರಮ ಮುಂದೆ ಸ್ಪಷ್ಟವಾಗಿ ಹೇಳಲ್ಪಡುತ್ತೆ.

ಶ್ಲೋ॥ ಪೂರ್ವಾದಿಧ್ವಜಧೂಮಸಿಹ್ಮಶುನಕೋಕ್ಷಾಣಃಕರೀಭೋಷ್ಟ್ರ್ಕಾಃ। ಧಾರ್ಯಸ್ಸರ್ವಪ್ರದೇಧ್ವಜೋಖಿಲಮುಖಃಪ್ರಾಗ್ಯಾಮ್ಯವಕ್ತ್ರೇಗಜಃ। ಪ್ರಾಗಾಸ್ಯೋವೃಷಭೋವಿವಾರುಣಮುಖಿಸಿಹ್ಮಃ ಪ್ರಶಸ್ತಾಇಮೇ। ಧೂಮೋಗ್ನೆಶ್ವಕೋಂತ್ಯಸ್ಯಖಿಗೆಪಸ್ಯೋಷ್ಟ್ರೋಟ್ಟಿಪಲ್ಯಾಃ ಖರಕಾಃ॥

ಟೀ॥ ಪೂರ್ವಾದಿ ದಿಕ್ಕುಗಳಲ್ಲಿ ಧ್ವಜಾದಿ ಆಯಗಳು, ಬಲಿಷ್ಟಗಳಾಗಿರುವವು, ಈ ಧ್ವಜಾದ್ಯಾಯಗಳು ತಮ್ಮ ತಮ್ಮ ದಿಕ್ಕುಗಳಲ್ಲಿ ಅಂದರೆ ಮುಖ್ಯ ಗೃಹವಲ್ಲದೆ ಈ ದಿಕ್ಕುಗಳಲ್ಲಿ ಇಂಥಾ ಆಯಗಳುಳ್ಳ ಗೃಹಗಳಂ ಕಟ್ಟಬೇಕೆಂಬದಾಗಿ ಮುಂದೆಹೇಳಲ್ಪಡುವದು. ಗೃಹಗಳಲ್ಲಿ ವರ್ತಿಸಬಹುದು (ಇಲ್ಲಿ ಮುಖ್ಯವಾಗಿ ದ್ವಾರವಂ ಹೇಳಬೇಕಾಗಿರುವದರಿಂದ ಈ ಶ್ಲೋಕದಲ್ಲಿ ದ್ವಾರಲಕ್ಷಣ ಮಾತ್ರ ತೆಗೆದುಕೊಂಡು ಮಿಕ್ಕಾದ ಲಕ್ಷಣಗಳು ಆ ಯಾ ಯ ಸಂದರ್ಭದಲ್ಲಿ ಹೇಳುತ್ತೇನೆ.) ಧ್ವಜಾಯದ ಮನೆಗೆ ಎಲ್ಲಾ ಕಡೆಯೂ ದ್ವಾರವಿಡಬಹುದು.. ಗಜಾಯುಕ್ಕೆ ಪೂರ್ವ ದಿಕ್ಕಿನಲ್ಲಿಯೂ ದಕ್ಷಿಣ ದಿಕ್ಕಿನಲ್ಲಿಯೂ, ಸಿಹ್ಮಾಯುಕ್ಕೆ ಪಶ್ಚಿಮ ಕಡೆ ಮಿಕ್ಕ ಮೂರುಕಡೆಯೂ ದ್ವಾರವಂ ಮಾಡಿದರೆ ಒಳ್ಳೇದು.

ಶ್ಲೋ॥ ಪ್ರಾಗ್ಧುಖ್ಯಮುಖಮುಂತ್ಯವೃಶ್ಚಿಕಕುಳೀರಾಣಾಂಪ್ರಜೇತೋಮುಖಂ। ಜೂಕೋಪಾಂತ್ಯ ಗವಾಂಯಮಾಸ್ಯ ಮಬಲಾಯುಗೇಣಕಾನಾಂಹಿತಂ। ಸೌಮ್ಯಾಸ್ಯಂಗೃಹಮಾದ್ಯಸಿಹ್ಮಧನುಷಾಮತ್ರೇಷ್ಟಕಾಷ್ಠಾನಸಂ। ಕ್ರಿತ್ವಾಪ್ರಾಸ್ಯಕಕುಬಾಕ್ಷವದನುಂತತ್ರಾಸ್ಯಮಾಸ್ಯನ್ನಸೇತ್॥

ಟೀ॥ ಮೀನ, ವೃಶ್ಚಿಕ, ಕರ್ಕಾಟಕ, ಈ ರಾಶಿಗಳವರು ಪೂರ್ವಮುಖವಾಗಿಯೂ, ತುಲಾ, ಕುಂಭ, ವೃಷಭ, ಈ ರಾಶಿಗಳವರು ದಕ್ಷಿಣಾಭಿಮುಖವಾಗಿಯೂ ಕನ್ಯಾ, ಮಿಥುನ, ಮಕರ, ಈ ರಾಶಿಗಳವರಿಗೆ ಪಶ್ಚಿಮಾಭಿಮುಖವೂ, ಮೇಷ, ಸಿಹ್ಮ, ಧನುಸ್ಸು, ಈ ರಾಶಿಗಳವರಿಗೆ ಉತ್ತರಾಭಿಮುಖದ್ವಾರವೂ ಪ್ರಶಸ್ತವಾಗಿರುವದು, ಈ ಪ್ರಕಾರ ಮುಖದ್ವಾರಗಳನ್ನು ಮಾಡಿ ಗೃಹಕ್ಕೆ ಅಲಂಕಾರವಾಗುವ ಹಾಗೆ ಯಾವ ದಿಕ್ಕಿನಲ್ಲಾಗಲಿ ಗವಾಕ್ಷಿಗಳನ್ನು ಮಾಡಬಹುದು. ಮತ್ತು ಈ ದ್ವಾರ ವಿಷಯದಲ್ಲಿ ಪ್ರ

ಧಾನ ಗೃಹಕ್ಕೆ ಸುತ್ತು ಇರುವ ಗೃಹಗಳ ದ್ವಾರಕ್ಕೆ (ಕಾಲಾಮೃತದಲ್ಲಿ)

ಶ್ಲೋ॥ ಕೃತ್ವಾದೌನವಧಾಸ್ವನಿರ್ಮಿತಗೃಹಕ್ಷೇತ್ರಂನವಸ್ವೇವತದ್ಭಾಗೇ ಷ್ವರ್ಕಮುಖಾನ್ನವಪ್ರತಿದಿಶಂ ಸಂಸ್ಥಾಪ್ಯತತ್ಸದ್ಮಸು । ಮತ್ರ್ಯಾಸು ತ್ಯಡತುಹ್ಯದಾಕವಿಗುರುಜ್ಞಾಂಶೇಷಕುರ್ಯಾತ್ಕ್ರಮಾ । ದ್ವಾರಾಣಿ ಪಶ್ಚಿಂಕ್ಷಸಮರು ತ್ಕೋಣಾದಿರ ವ್ಯಾಡಿಷು ॥

ಎಂದು ಹೇಳಿರುವುದರಿಂದ ತನ್ನ ಮನೆಯ ಕ್ಷೇತ್ರವನ್ನು ೯ ಭಾಗಮಾಡಿ ಅವುಗಳಲ್ಲಿ ಪಶ್ಚಿಮ ಮನೆಯೂ ಈಶಾನ್ಯಾದಿ ಅಗ್ನಿಕೋಣದವರಿಗೂ ವು ತ್ತರ ಮನೆಯಾದರೆ ಆಗ್ನೇಯಾದಿ ನೈರುತ್ಯದವರಿಗೂ ಪೂರ್ವಗೃಹವಾದರೆ ನೈಋತ್ಯ ಮೊದಲು ವಾಯುವ್ಯದವರಿಗೂ ದಕ್ಷಿಣಗೃಹವಾದರೆ ವಾಯುವ್ಯ ಮೊದಲು ಈಶಾನ್ಯದವರಿಗೂ ಒಂಭತ್ತು ಭಾಗಮಾಡಿ ಕ್ರಮವಾಗಿ ನವಗ್ರ ಹಗಳಂ ಬರೆದು ಶುಕ್ರನ ಭಾಗದಲ್ಲಿ ಮನುಷ್ಯರಮನೆಗೂ ಬೃಹಸ್ಪತಿಭಾಗ ದಲ್ಲಿ ದೇವರಮನೆಗೂ ಬುಧನ ಭಾಗದಲ್ಲಿ ಪಶುವುಗಳು ಕುದುರೆಗಳು ಮೊದಲಾದುವುಗಳ ಮನೆಗಳಿಗೂ ಬಾಗಿಲನ್ನು ಏರ್ಪಡಿಸಬೇಕೆಂದು ತಾತ್ಪರ್ಯ ಮತ್ತು ಪಕ್ಷಾಂತರವನ್ನು ಹೇಳುತ್ತಾನೆ.

ಶ್ಲೋ॥ ಸರ್ವೇಷಾಮಥವಾಯಥಾರುಚಿಗೃಹದ್ವಾರಾಣಿಕುರ್ಯಾತ್ಕವೇ ರಾಚಾರ್ಯಸ್ಯಬುಧಸ್ಯವಾಪ್ರದಿಶಂ ಭಾಗೇಸಮಸ್ತಾಲಯೇ । ಅಷ್ಟ ಷ್ಟಷ್ಟಸುವಾ ತ್ರಿಷುಗೃಹೇ ಕಾರ್ಯೇಷು ಭಾಗೇಷು ತನ್ಮಧ್ಯೇನಾಧಿ ಕವಾಮಭಾಗಸಹಿತಂಥಾಮ್ನಃ ಕವಾಟಾನ್ವಿತಂ ॥

ಅಂದರೆ ಪೂರ್ವೋಕ್ತ ಪ್ರಕಾರ ೯ ಭಾಗಮಾಡಿ ದೇವಾದಿ ಗೃಹಗಳಿಗೆ ಬುಧ, ಗುರು, ಶುಕ್ರ, ಭಾಗಗಳಲ್ಲಿ ಯಾವದಾದರೂ ಉತ್ತಮವೆಂತಲೂ ಅಥವಾ ಗೃಹಕ್ಷೇತ್ರವನ್ನು ೮ ಭಾಗಮಾಡಿ ಕೇತುವಂಬಿಟ್ಟು ೮ ಗ್ರಹಗಳಂ ಬರೆದು ಬುಧಾದಿ ಭಾಗಗಳಲ್ಲಿ ದ್ವಾರವಿಡಬೇಕೆಂತಲೂ ಅಥವಾ ಮನೆಯನ್ನು ೩ ಭಾಗಮಾಡಿ ಎಡಗಡೆ ಸ್ವಲ್ಪಹೆಚ್ಚಾಗಿ ಬಿಟ್ಟು ಮಧ್ಯಭಾಗದಲ್ಲಿ ಬಾಗಿಲಿ ಡಬಹುದೆಂತಲೂ ಈ ವಿಷಯದಲ್ಲಿ ಗೃಹನಿಯಮವಿಲ್ಲದೆ ಕದಗಳುಳ್ಳ ಬಾ ಗಿಲುಗಳಂ ಮಾಡಬಹುದೆಂದು ತಾತ್ಪರ್ಯವು,

ಶ್ಲೋ॥ ಅಕಚಾಃಪಶ್ಚಿಮದ್ವಾರೇಟವರ್ಗಃ ಪಶ್ಚಿಮೋತ್ತರೆ । ಧನದೆ ತಪವರ್ಗಾಚ ಯಶ[illegible]ರ್ವೇತು ಪಶ್ಚಿಮೆ ॥

ಟೀ॥ ಅಕಚ ಈ ವರ್ಗಧವರಿಗೆ ಪಶ್ಚಿಮದ್ವಾರವೂ ಟವರ್ಗದವರಿಗೆ ಪ

ಶ್ಚಿಮ ದ್ವಾರವೂ ಉತ್ತರದ್ವಾರವೂ ತಪವರ್ಗದವರಿಗೆ ಉತ್ತರ ಬಾಗಲೂ ಯ-ಶ- ಈ ಎರಡು ವರ್ಗದವರಿಗೂ ಪೂರ್ವ ಮತ್ತು ಪಶ್ಚಿಮ ಬಾಗಲೂ ಶುಭಕರವಾದದ್ದು.

ಚತುಶ್ಶಾಲೆ, ತ್ರಿಶಾಲೆ, ದ್ವಿಶಾಲೆ, ಇವುಗಳಿಗೆ ದ್ವಾರನಿರ್ಣಯ

ಶ್ಲೋ ॥ ಚತುಶ್ಶಾಲಾತ್ರಿಶಾಲಾನಾಂದ್ವಿಶಾಲಾನಾಂತುವಾಮುಖಂ ।
ವಾಸ್ತುದೋಷಂವಿನಾಕುರ್ಯಾದೇವದೋಷೋನ ಯುಜ್ಯತೆ ॥

ಟೀ॥ ಚತುಶ್ಶಾಲೆ, ತ್ರಿಶಾಲೆ, ದ್ವಿಶಾಲೆ, ಇವುಗಳಿಗೆ ವಾಸ್ತುಪುರುಷನೆನ್ನನುಸರಿಸಿ ದ್ವಾರವಂ ನಿರ್ಣಯಿಸಬೇಕೆಂಬ ಅವಶ್ಯಕವಿಲ್ಲ. ಇದರಲಕ್ಷಣ ಕಾಮಿಕಾಗಮದಲ್ಲಿ ವಿಶೇಷವಾಗಿ ಹೇಳಲ್ಪಟ್ಟಿರುತ್ತೆ. ಇಲ್ಲಿ ಅನಾವಶ್ಯಕವಾದುದರಿಂದ ಬರಿಯಲಿಲ್ಲ ... ಒಳಮನೆ ಬಾಗಿಲುಗಳಿಗೆ ಲಕ್ಷಣ.

ಶ್ಲೋ॥ ನವಭಾಗೆಂಗೃಹಂಕುರ್ಯಾತ್ಪಶ್ಚಿಮೇಯಾಮ್ಯಪಂಚಕಂತ್ರಿ ।
ಭಾಗಂಚೋತ್ತರೆ ಪೂರ್ವೆ ಶೇಷಂ ದ್ವಾರಂ ಪ್ರಕೀರ್ತಿತಂ ॥

ಟೀ॥ ಮನೆಯ ಗೋಡೆಯನ್ನು ಒಂಭತ್ತು ಭಾಗಮಾಡಿ ಮೂಡಲ ಬಾಗಿಲಾದರೆ ದಕ್ಷಿಣಕಡೆ ಮೂರು ಭಾಗಗಳನ್ನು ಉತ್ತರದ ಕಡೆ ೫ ಭಾಗಗಳನ್ನು ಬಿಟ್ಟು ೪ನೇ ಭಾಗದಲ್ಲಿಯೂ ಪಶ್ಚಿಮದ್ವಾರವಾದರೆ ದಕ್ಷಿಣಕಡೆ ೫ ಭಾಗಗಳಂ ಬಿಟ್ಟು ೬ನೇ ಭಾಗದಲ್ಲಿಯೂ ಉತ್ತರದ ಬಾಗಿಲಾದರೆ ಪಶ್ಚಿಮ ಕಡೆ ೫ ಭಾಗಗಳಂ ಬಿಟ್ಟು ೬ನೇ ಭಾಗದಲ್ಲಿಯೂ ದಕ್ಷಿಣಬಾಗಿಲಾದರೆ ಪಶ್ಚಿಮದಲ್ಲಿ ೩ ಭಾಗಗಳಂ ಬಿಟ್ಟು ೪ ನೇ ಭಾಗದಲ್ಲಿಯೂ, ಒಳಮನೆ ಬಾಗಿಲಿಡುವದು ಶುಭಕರವು. ಪೂರ್ವಾದಿ ದಿಕ್ಕು (ಮೂಡಲಬಾಗಿಲುಗಳ) ದ್ವಾರಗಳಿಗೆ ಭಾಗ ಕ್ರಮ.

ಶ್ಲೋ॥ ಅಷ್ಟಾವಷ್ಟಾವೃತಿದಿಶಂದ್ವಾರಾಣಾಮುಪಿಕಲ್ಪಯೇತ್। ಹಾನಿರ್ನಿಸ್ಸತ್ವಸುಧರ್ಮಾಷಿಸ್ಪರ್ಶಪೂಜಾಮುಹಾಧನಂ । ಅತಿಶೋಕಮತಿ ಕ್ರೋಧರ್ಭೀತಿರ್ದಿಶಿಶಚೀಪತೇಃ ॥

ಟೀ॥ ಈ ಶ್ಲೋಕದ ತಾತ್ಪರ್ಯವುಳ್ಳ ಕಾಲಾಮೃತದ ಶ್ಲೋಕವನ್ನು ಮೇಲೆ ಉದಾಹರಿಸಿದ್ದರೂ ಪ್ರತಿಭಾಗಕ್ಕೂ ಗುಣದೋಷಗಳಂ ತಿಳಿಸುವುದರಿಂದ ಪುನಃ ಬರಿಯಲ್ಪಟ್ಟಿತು. ಮನೆಯಮೂಡಲು ಕಡೆಯ ಗೋಡೆ

ಯನ್ನು ೮ ಭಾಗ ಮಾಡಿದರೆ ಪ್ರತಿಭಾಗಕ್ಕೂ ಫಲ,೪ಕ್ಕೆ ಹಾನಿ,೨ಕ್ಕೆ ದುರ್ಬ ಲ, ೩ಕ್ಕೆ ದ್ರವ್ಯಲಾಭ, ೪ಕ್ಕೆ ವಿಶೇಷಧನ, ೬ಕ್ಕೆ ಬಹಳಶೋಕ,೭ಕ್ಕೆ ಬಹಳ ಕ್ರೋಧ ೮ಕ್ಕೆ ಭಯ ಈ ಪ್ರಕಾರ ಪೂರ್ವದ್ವಾರಕ್ಕೆ ತಿಳಿಯುವದು.

ದ ಕ್ಷಿ ಣ ದ್ವಾ ರ ಕ್ಕೆ.

ಶ್ಲೋ॥ ನಿರ್ಧನಂಬಂಧನಂಭೀತಿರರ್ಥಾಪ್ತಿರ್ಧಾನ್ಯವರ್ಧನಂ|ಅನಾ ತಂಕಂವ್ಯಾಧಿಭಯಂನಿಸ್ಸತ್ವಂದಕ್ಷಿಣಾದಿಶಿ ॥

ಟೀ॥ ದಕ್ಷಿಣದಕಡೆ ಗೋಡೆಯನ್ನು ೮ ಭಾಗ ಮಾಡಲಾಗಿ ಪ್ರತಿಭಾಗದ ಫಲ ೧ಕ್ಕೆ ಮರಣ, (ನಿರ್ಧನಂಯೆಂಬ ಪಾಠಾಂತರದಲ್ಲಿ ದ್ರವ್ಯಲಾಭ)೨ಕ್ಕೆ ಕಾರಾಗೃಹಾದಿ ಬಂಧನಪ್ರಾಪ್ತಿ, ೩ಕ್ಕೆ ಭಯ, ೪ಕ್ಕೆ ಧನಸಂಪತ್ತು ೫ಕ್ಕೆ ಧಾನ್ಯವೃದ್ಧಿ, ೬ಕ್ಕೆ ನಿರ್ಭಯ, ೭ಕ್ಕೆ ರೋಗಭೀತಿ, ೮ಕ್ಕೆನಿಸ್ಸತ್ವ, ಈರೀತಿ ದಕ್ಷಿಣದ್ವಾರಕ್ಕೆ ತಿಳಿಯುವದು.

ಪ ಶ್ಚಿ ಮ ದ್ವಾ ರ ಕ್ಕೆ.

ಶ್ಲೋ॥ ಪುತ್ರಹಾನಿಶ್ಶತ್ರುವೃದ್ಧಿರ್ಲಕ್ಷ್ಮೀಪ್ರಾಪ್ತಿರ್ಧನಾಗಮಂ | ಸೌಭಾಗ್ಯಮತಿದೌರ್ಭಾಗ್ಯಂದುಃಖಂಶೋಕಂಚಪಶ್ಚಿಮೆ ॥

ಟೀ॥ ಪಶ್ಚಿಮಕಡೆ ಗೋಡೆಯನ್ನು ನೈಋತ್ಯದಿಂದಾ ವಾಯುವ್ಯದವರಿಗೂ ೮ ಭಾಗ ಮಾಡಿದರೆ, ೧ಕ್ಕೆ ಪುತ್ರನಾಶನವು, ೨ಕ್ಕೆ ಶತ್ರುವೃದ್ಧಿಯೂ ೩ಕ್ಕೆ ಸಂಪತ್ತು,೪ಕ್ಕೆ ದ್ರವ್ಯಲಾಭ,೫ಕ್ಕೆ ಸೌಭಾಗ್ಯ ೬ಕ್ಕೆ ಬಹಳ ಬಡತನ, ೭ಕ್ಕೆ ದುಃಖ ೮ಕ್ಕೆ ಶೋಕ,ಈ ಪ್ರಕಾರ ಪಡವಲು ಬಾಗಿಲಿಗೆ ಫಲ ತಿಳಿಯುವದು.

ಉ ತ್ತ ರ ದ್ವಾ ರ ಕ್ಕೆ.

ಶ್ಲೋ॥ ಕಳತ್ರನಿಂದಾನಿಸ್ಸತ್ವಂಹಾನಿರ್ಧಾನ್ಯಧನಾಗಮಃ | ಸಂಪ ದ್ವೃದ್ಧಿರ್ಮಹಾಭೀತಿರಾಮಯಂಚೋತ್ತರಾದಿಶಿ ॥

ಟೀ॥ ಉತ್ತರದ ಕಡೆಗೋಡೆಯನ್ನು ವಾಯುವ್ಯದಿಂದ ಈಶಾನ್ಯದವರಿಗೂ ೮ ಭಾಗಮಾಡಿ ೧ಕ್ಕೆ ಭಾರ್ಯಾಪವಾದ, ೨ಕ್ಕೆ ಬಲಹೀನ, ೩ಕ್ಕೆ ಕೇಡು, ೪ಕ್ಕೆ ಧಾನ್ಯಸಮೃದ್ಧಿ, ೫ಕ್ಕೆ ಧನವೃದ್ಧಿ, ೬ಕ್ಕೆ ಸಂಪತ್ತು, ೭ಕ್ಕೆ ಭಯ, ೮ಕ್ಕೆ ಅನಾರೋಗ್ಯ, ಈ ಪ್ರಕಾರ ಉತ್ತರದ್ವಾರಕ್ಕೆ ಫಲ ತಿಳಿಯುವದು.

ಶ್ಲೋ॥ ಅತ್ಯುಛ್ರಯಂಚೋರಭಯಮತಿಹ್ರಸ್ವಂಕ್ಷಯಾಭಯಂ|ಚ ತುಷ್ಷಷ್ಟ್ಯಂಗುಳೋತ್ಸೇಧಂಚತುಸ್ತ್ರಿಂಶೇತು ವಿಸ್ತರಂ ॥

ಟೀ|| ತಲೆಬಾಗಲು ಬಹಳ ಉದ್ದವಾದರೆ ಚೋರಭಯ ವುಂಟಾಗುವದು ಬಹಳ ಗಿಡ್ಡಾದರೆ ದರಿದ್ರವುಂಟಾಗುವದು, ಆದುದದರಿಂದ ೬೪ ಅಂಗುಲಗಳ ಉದ್ದವೂ ೩೪ ಅಂಗುಲಗಳ ಅಗಲವೂ ಮಾಡಬೇಕು.

ಶ್ಲೋ|| ಉತ್ಸೇಧಂನವಭಾಗಂಸ್ಯಾದ್ವಿಸ್ತಾರಂಪಂಚಭಾಗಕಂ| ದ್ವಾರಾಣಾಮುಪಿಸರ್ವೇಷಾಂ ದ್ವಾರಬಂಧಂಪ್ರಮಾಣತಃ ||

ಟೀ|| ಸಾಮಾನ್ಯವಾಗಿ ಎಲ್ಲಾ ದ್ವಾರಗಳಿಗೂ ೯ ಭಾಗ ಉದ್ದವೂ ೫ಭಾಗ ಅಗಲವೂ ಮಾಡಲಾಗಿ ಶುಭಕರವಾಗುವುದು.

ಶ್ಲೋ||ದ್ವಾರಾಯತಂದ್ವಿಭಾಗಂಸ್ಯಾದ್ವಿಸ್ತಾರಂಚೈಕಭಾಗಕಂ|ದ್ವಾರಮಾನಮಿದಂಪ್ರೋಕ್ತಂ ದ್ವಾರಬಂಧಂ ಪ್ರಮಾಣತಃ ||

ಟೀ ದ್ವಾರದವುದ್ದ ಯೆರಡುಭಾಗವೂ, ಅಗಲ ಒಂದು ಭಾಗವೂ ಈಪ್ರಕಾರ ಪ್ರಮಾಣಾಂತರವುಂಟು.

ಶ್ಲೋ|| ಏಕಾದಶೋಚ್ಛ್ರಯಂಪ್ರೋಕ್ತಂವಿಸ್ತಾರಂಪಂಚಭಾಗತಃ| ಸರ್ವೇಷಾಂದ್ವಾರಮಾನಂಚಗಾರ್ಗೇಯವಚನಂತಥಾ||

ಟೀ|| ಹನ್ನೊಂದು ಭಾಗೆ ಉದ್ದವೂ ಐದುಭಾಗೆ ಅಗಲವೂ ಉಂಟಾದ ದ್ವಾರಬಂಧವು ಎಲ್ಲಕ್ಕೂ ಆಗಬಹುದೆಂದು ಗಾರ್ಗೇಯ ವಚನ.

ಶ್ಲೋ|| ಪ್ರಾಕ್ಪಶ್ಚಿಮಮುಖೇಗೇಹೇಕವಾಟಂದಕ್ಷಿಣೆತಥಾ|ಯಾಮ್ಯೋತ್ತರಮುಖೇಗೇಹೆಪಶ್ಚಿಮೇತುಕವಾಟಕಂ ||

ಟೀ|| ಪೂರ್ವಾಭಿ ಮುಖವಾಗಿಯೂ ಪಶ್ಚಿಮಾಭಿ ಮುಖವಾಗಿಯೂ ಇರುವ ದ್ವಾರಗಳಿಗೆ ದಕ್ಷಿಣಪಾರ್ಶ್ವದಲ್ಲಿಯೂ ದಕ್ಷಿಣೋತ್ತರಾಭಿಮುಖವುಳ್ಳ ದ್ವಾರಗಳಿಗೆ ಪಶ್ಚಿಮಭಾಗದಲ್ಲಿಯೂ ಕವಾಟ (ಕದವನ್ನು) ಇಡಿಸಬೇಕು.

ಶ್ಲೋ|| ಏಕಖಂಡಂಭವೇದ್ರಾಜ್ಯಂದ್ವಿಖಂಡಂವಿತ್ತನಾಶನಂ | ತ್ರಿಖಂಡಂರಾಜ್ಯವೃದ್ಧಿಂಚ ಚತುಃಖಂಡಂದರಿದ್ರತಾಂ | ಪಂಚಸಪ್ತಭವೇದ್ರಾಜ್ಯಂಕವಾಟಂಸ್ಥಾಪಯೇದ್ಗೃಹೆ ||

ಟೀ|| ಕದವು ಒಂದೇ ಹಲಿಗೆಯಾಗಿದ್ದರೆ ರಾಜ್ಯವನ್ನು ಯೆರಡು ಹಲಿಗೆಗಳಾಗಿದರೆ ಧನನಾಶನವನ್ನು, ಮೂರು ಹಲಿಗೆಗಳಾಗಿದ್ದರೆ ರಾಜ್ಯವೃದ್ಧಿಯನ್ನು ನಾಲ್ಕು ಖಂಡಗಳಾಗಿದ್ದರೆ ದರಿದ್ರವನ್ನು ಐದು, ಏಳು ಖಂಡಗೆ

ಳಾಗಿದ್ದರೆ ದಾಣ್ಯವನ್ನು ಉಂಟುಮಾಡುವದು, ಈ ಪ್ರಕಾರ ತಿಳಿದು ಕದಕ್ಕೆ ಹಲಿಗೆಗಳನ್ನು ಜೋಡಿಸಬೇಕು.

ಕವಾಟಗಳನ್ನಿಡುವದಕ್ಕೆ ಯೋಗ್ಯಕಾಲ.

ಶ್ಲೋ॥ ರೋಹಿಣೀರೇವತೀಸೌಮ್ಯಮನೂರಾಧಾಪುನರ್ವಸೂ। ತಿಷ್ಯಂ ಚವುತ್ತರಂ ಮೂಲೇಕವಾಟಸ್ಥಾಪನೇಶುಭಂ ॥

ಟೀ॥ ರೋಹಿಣೀ, ರೇವತೀ, ಮೃಗಶಿರ ಅನೂರಾಧ, ಪುನರ್ವಸು, ಪುಷ್ಯಮಿ, ಉತ್ತರಾ, ಉತ್ತರಾಭಾದ್ರ, ಉತ್ತರಾಷಾಢ, ಮೂಲ, ಈ ನಕ್ಷತ್ರಗಳಲ್ಲಿ ಕದಗಳನ್ನು ಸ್ಥಾಪಿಸಿದರೆ ಶುಭಕರವು.

ಶ್ಲೋ॥ ಚರೇಸ್ಥಿರೇಚನಕ್ಷತ್ರೇಬುಧಶುಕ್ರದಿನೇಯುತೆ। ಶುಭೇಕವಾಟಯೋಗಸ್ಯಾದ್ವಿಸ್ವಭಾವೋದಯೇಗೃಹೇ । ದ್ವಾರಬಂಧಂತುಸಂಸ್ಥಾಪ್ಯಂಸ್ಥಿರರಾಶಿ ಶುಭೋದಯೆ । ಬಂಧಸಂದ್ವಿಶರೀರೇತು ನಿಕ್ಷಿಪೇದ್ವಾಸ್ತುಕೋವಿದಾಃ ॥

ಟೀ॥ ಚರಸ್ಥಿರ ನಕ್ಷತ್ರಗಳಲ್ಲಿಯೂ ಅಂದರೆ ರೋಹಿಣಿ, ಉತ್ತರೆ, ಉತ್ತರಾಷಾಢೆ, ಉತ್ತರಾಭಾದ್ರೆ, ಈ ಸ್ಥಿರನಕ್ಷತ್ರಗಳಲ್ಲಿಯೂ ಸ್ವಾತಿ ಪುನರ್ವಸೂ, ಶ್ರವಣ, ಧನಿಷ್ಟೆ, ಶತಭಿಷಕ್, ಈ ಚರನಕ್ಷತ್ರಗಳಲ್ಲಿಯೂ ಬುಧ, ಶುಕ್ರವಾರಗಳಲ್ಲಿಯೂ ಲಗ್ನಗಳಲ್ಲಿಯೂ ಅಂಶಗಳಲ್ಲಿಯೂ ಇವರಿರುವಾಗಲೂ ಕದಗಳನ್ನಿಡುವದು ಶುಭಕರವು, ಸ್ಥಿರ ರಾಶಿಗಳಲ್ಲಿ ಶುಭಗ್ರಹಗಳಿರುವಾಗ ದ್ವಾರಬಂಧವೆತ್ತುವದಕ್ಕೂ, ದ್ವಿಸ್ವಭಾವ ಲಗ್ನಗಳಲ್ಲಿ ಬಾಗಲು ಜೋಡಿಸುವುದಕ್ಕೂ ಒಳ್ಳೇದು.

ಇದಿರು ಬಾಗಿಲುಗಳಿಗೆ ಲಕ್ಷಣ.

ಶ್ಲೋ॥ ಏಕಾಯವ್ಯಯಗೇಗೇಹೆಕುರ್ಯಾದ್ದ್ವಾರಾಣಿಸಂಮುಖಂ। ಪೃಥಗಾಯಾತ್ಮಭವನೇ ಪ್ರತಿಹಾರಂನಸಂಮುಖಂ ॥

ಟೀ॥ ಆಯವ್ಯಗಳು ಒಂದೇ ಆಗಿರುವ ಅಂದರೆ ಒಂದೇ ವಾಸ್ತುವಿಗೆ ಒಳಪಟ್ಟಿರುವ ನಿವೇಶನದಲ್ಲಿ ಇದಿರುಬದರಾಗಿ ದಾರಗಳಿಡಬಹುದು. ಬೇರೆ ಆದರೆ ಇಡಕೂಡದು. ಹಾಗೆ ಇಟ್ಟಿದ್ದಾದರೆ ರೋಗವು, ಕಲಹವೂ, ಹಾನಿಯೂ ವುಂಟಾಗುವದು ಮತ್ತು ಗೋಡೆಯ ಮೂಲೆ ಮೊದಲಾದವಕ್ಕೆ ಇದಿರಾಗಿ ದ್ವಾರವಿಡಕೂಡದೆಂದು ಮುಹೂರ್ತ ಮಾರ್ತಾಂಡದಲ್ಲಿ ಹೇಳಿದೆ.

ಶ್ಲೋ॥ ಕೋಣಸ್ತಭ್ರಮಕೂಪ ಕರ್ದಮತರುದ್ವಾಸ್ತಂಭದೇವೆಕ್ಷಿ

ತಂ | ಸದ್ಮೋಚ್ಛ್ರಿದ್ವಿಗುಣಾಧಿಕಾಂತರಭವೇಭೇದೇನದೋಷಃಕಿಲ ||

ಟೀ|| ಅಂದರೆ,-ಗೋಡೆಮೂಲೆ, ಹಾದಿ, ಬೀಸುವಕಲ್ಲು, ಕುಂಬಾರಚಕ್ರ ಮೊದಲಾದ್ದು, ಭಾವಿ ಸ್ನಾನಾದಿಗಳಿಂದ ಯಾವಾಗ್ಯೂ ಇರುವ ಕೆಸರು, ಮರ, ಬಾಗಲು, ಸ್ತಂಭ, ದೈವದೃಷ್ಟಿ ಅಂದರೆ-ಈಶ್ವರನಿಗೆ ಇದಿರು ಇಲ್ಲದೆ ಶಿವನಿಗೆ ಪುರೋದಷ್ಟಿಯೂ, ವಿಷ್ಣುವಿಗೆ ಪಶ್ಚಾದ್ದೃಷ್ಟಿಯೂ, ಉಂಟಾಗುವದು ಆಗಮಗಳಲ್ಲಿ ಪ್ರಸಿದ್ಧ ಇಂಥಾವುಗಳಿಗೆ ಅಭಿಮುಖವಾಗಿ ಬಾಗಿಲನ್ನಿಡಬಾರದು. ಹಾಗೆ ಇಡಬೇಕಾದರೆ, ಮನೆಯ ಉದ್ದ ಆಳತೆಗೆ ಎರಡರಷ್ಟಕ್ಕೆ ಹೆಚ್ಚಾಗಿ ಅಂತರವಿದ್ದರೆ ಮಾಡಬಹುದು, ಇದೇ ಅರ್ಥವೇ ಆಗಮಾಂತರದಲ್ಲಿಯೂ ಹೇಳಲ್ಪಟ್ಟಿದೆ.

ಶ್ಲೋ|| ಮಾರ್ಗತರುಕೋಣಕೂಪಭ್ರಮವಿದ್ಧ ಮಶುಭದಂದ್ವಾರಂ |
ಸದ್ಮೋಛ್ರಯಾದ್ದ್ವಿಗುಣಾಂತ್ಯಕ್ತ್ವಾ ಭೂಮಿಂನದೋಷಾಯ ||
ಕಾತ್ಯಾಯನಗೃಹ್ಯಕಾರಿಕೆಯಲ್ಲಿ ||ಶ್ಲೋ|| ವಿದ್ಧಂಕೂಪತರುಸ್ತಂಭಪಥಜುಷಂ ಕೈಸ್ಸದ್ಮವತ್ತೀತದ್ವಾರಮಶುಭಂಪ್ರೋಕ್ತಂ ಮತ್ಯುಚ್ಚಂ ನೀಚಮೇವಚ || ....

ಈ ಎರಡು ಶ್ಲೋಕಗಳ ಅರ್ಥವೂ ಮೇಲಿನ ಶ್ಲೋಕಕ್ಕೆ ಸರಿಯಾಗಿದೆ.

ಶ್ಲೋ|| ಗೃಹೇಸ್ಯವಾಮೇಯಾನ್ಯೈಚಪ್ರತ್ಯೇಕಂನಿರ್ಮಿತಂ ಗೃಹಂ |
ಸ್ತಂಭಶೂಲಂವಿನಾಕುರ್ಯಾತ್ ವಕ್ರಸ್ತಂಭಂವಿನಾಶನಂ|| ವಾಮದ
ಕ್ಷಿಣವೇದಸ್ತುಮಿಥ್ಯೈರೇವಂವಿನಿಶ್ಚಿತಃ ||

ಟೀ|| ಒಂದೇ ನಿವೇಶನದ ಕಟ್ಟಡ ಪ್ರಧಾನ ಗೃಹಕ್ಕೆ ನಾಲ್ಕು ದಿಕ್ಕುಗಳಲ್ಲಿಯೂ ಕಟ್ಟುವ ಮನೆಗಳ ಸ್ತಂಭಗಳು ಮೊದಲಾದವುಗಳನ್ನು ಪ್ರಧಾನ ಗೃಹಕ್ಕೆ ಶೂಲೆ ಆಗುವಹಾಗೆ ಕಟ್ಟಬಾರದು.

ಸ್ತಂಭಪ್ರತಿಷ್ಟಾ ಲಗ್ನದ ದೆಸೆಯಿಂದ ಗೃಹಗಳಿಗೆ ಆಯುಸ್ಸು.

ಶ್ಲೋ|| ಬುಧೇಲಗ್ನಗತೇಚಂದ್ರೇಮಧ್ಯಾಹ್ನೇರವಿಭೇಸ್ತ| ಶುಭಯೋಗಸ್ತಮಾಖ್ಯಾತಆಯುಷ್ಯಂಚಶತಾಬ್ದಕಂ ||

ಟೀ|| ಬುಧನು ಲಗ್ನದಲ್ಲಿಯೂ, ಚಂದ್ರನು ಮಧ್ಯಾಹ್ನದಲ್ಲಿಯೂ, ಶನಿಯು ಅಸ್ತಗತನಾಗಿಯೂ, ಇರುವ ಈ ಶುಭಯೋಗದಲ್ಲಿ ಸ್ತಂಭಪ್ರತಿಷ್ಟೆ ಮಾಡಿದರೆ ಆ ಮನೆ ನೂರುವರುಷ ಬಾಳುವದು.

ಶ್ಲೋ||ಚಂದ್ರೇಲಗ್ನೇಚಪುತ್ರೇಚಮಧ್ಯಾಹ್ನೇಸ್ತಮಯೇಬುಧೇ|ಅಷ್ಟಾ
ಶತಾಬ್ದಾಯೋಗೇನಪ್ರೋಕ್ತಮಾಯುರ್ಮುನಿಷೀಭಿಃ ||

ಟೀ|| ಚಂದ್ರನು ಲಗ್ನದಲ್ಲಿದ್ದು, ಶನಿಯು ಮಧ್ಯಾಹ್ನದಲ್ಲಿದ್ದು ಬುಧನು ಅಸ್ತನಾಗಿದ್ದರೆ ಈ ಯೋಗದಲ್ಲಿ ಎಂಟುನೂರು ವರ್ಷಬಾಳುವದು. ಮತ್ತು ಕಾಲಾಮೃತದಲ್ಲಿ—ಶ್ಲೋ|| ಲಗ್ನೇಕರ್ಕಟಕೇಯದಾಗುರುದಿನೇಜೀವೇಂದು ಸಂಸ್ಥೇಥವಾ ನಿರ್ಮಾಣೇಭವನೇಪಿಜಾತಪುರುಷೋರಾಜಾಭವೇತ್ಸರ್ವದಾ || ಲಗ್ನೇಜಾಪಗೃಹೇಝುಷೇಗುರುದಿನೇಶುಕ್ರಾರ್ಯಸಂಸ್ಥೇತದಾ | ನಿರ್ಮಾಣೇ ಭವನೇಪಿಜಾತಪುರುಷೋಭೂಪೋಥವಾತತ್ಸಮಃ || ಅಂದರೆ—ಗುರುವಾರ ದಲ್ಲಿ ಗುರುಚಂದ್ರರಿಂದ ಕರ್ಕಾಟಕ ಲಗ್ನದಲ್ಲಿ ಕಟ್ಟಿದ ಮನೆಯಲ್ಲಿ ಹುಟ್ಟಿ ದವನು ಬದುಕಿರುವ ಪರ್ಯಂತರವೂ ರಾಜನಾಗಿರುವನು. ಶ್ಲೋ|| ಆಯು ಷ್ಯಂಶತವರ್ಷ ಮಿಜ್ಯಸಹಿತೇ ತದ್ವಚ್ಚಶುಕ್ರಾನ್ವಿತೆ ತಸ್ಯಾರ್ಧಂ ಬುಧಸಂ ಯುತೆ | ಸುಬಲಿಭಿಸ್ಸೌಮ್ಯೈಸ್ತ್ರಿಭಿಸ್ಸಂಯುತೇ | ಲಗ್ನೆ ನಿರ್ಮಿತ ಸದ್ಮನ ಸ್ತು ಬಹ ಸ್ಸಂವತ್ಸರಾಸ್ಸ್ಯ ಶ್ಮಭಾಸ್ತದ್ಗೇಹೇ ವಸತೋನರಸ್ಯ ಬಹವೋ ಭೋಗಾಭವೇಯುಸ್ಸದಾ || ಗುರು ಶುಕ್ರರು ಲಗ್ನದಲ್ಲಿರುವಾಗ ಕಟ್ಟಿದ ಮನೆ ನೂರು ವರ್ಷಗಳು ಬುಧನು ಲಗ್ನದಲ್ಲಿರುವಾಗೆ ಕಟ್ಟಿದ ಮನೆ ೫೦ ವರುಷಗಳೂ ಸ್ಥಾನಾದಿ ಬಲಯುಕ್ತರಾದ ಈ ಶುಭಗ್ರಹಗಳ ಮೂವರಿಂ ದಲೂ ಕೂಡಿ ಲಗ್ನದಲ್ಲಿ ಕಟ್ಟಿದ ಮನೆಯು ನೂರುವರ್ಷಗಳಿಗೆಮೇಲ್ಪಟ್ಟು ಸ್ಥಿರವಾಗಿ ಬಾಳುವದಲ್ಲದೆ ಆ ಮನೆಯಲ್ಲಿರುವ ಪುರುಷನಿಗೆ ಅತ್ಯಂತ ಮಂ ಗಳ ಭೋಗಗಳುಂಟಾಗುವವು.

## ಮಾಟ ಲಕ್ಷಣ,

ಶ್ಲೋ|| ಪಾಂಚಾಲವೈದೇಹಕೆ ಕೌರವಾಖ್ಯಂರಾಜಕನ್ಯಕಂ ಮಾಗಧ ಶೂರಸೇನಂ | ತಥಾಚಗಾಂಧಾರಮವಂತಿಕಾಖ್ಯಮಿತ್ಯಷ್ಟಕಂಚ್ಚೈವ ಗೃಹಪ್ರಮಾಣಂ ||

ಟೀ|| ಪಾಂಚಾಲ, ವೈದೇಹ, ರಾಜಕನ್ಯಕ, ಮಾಗಧ, ಶೂರಸೇನ, ಗಾಂಧಾರ, ಅವಂತಿ, ಎಂಬದಾಗಿ ೮ ವಿಧವಾಗಿ ಗೃಹಭೇದಗಳಿರುವವು,

ಶ್ಲೋ|| ಗೃಹವಿಸ್ತಾರಕಂಸೂತ್ರಂಚತುಷ್ಕೃತ್ವಾಪ್ರಯತ್ನತಃ|ತತ್ರೈ ಕೇಸಮಾಯುಜ್ಯಮಧ್ಯಮುಧ್ಯಪ್ರಯತ್ನತಃ||ತದುಛ್ರಯಪ್ರಮಾಣೇ ನಸ್ವಲ್ಪಂಪಾಂಚಾಲಮುಚ್ಯತೆ | ಸಾರ್ಧದ್ವಯಾಂಗುಳಂತಸ್ಮಾದೆಕೈಕ ಮಧಿಕಂಕುರು | ವೈದೇಹಿಕೌರವಂ ಚ್ಚೈವರಾಜಸ್ಯೈಮಗಧಂತಥಾ | ಶೂರಸೇನಂಚಗಾಂಧಾರಂ ಸ್ವಪಂಚಾವಂತಿಕಂತಥಾ |ಸರ್ವಮೇಕತ್ರ

ಸಂಯುಕ್ತಂ ಸಾರ್ಧಸಪ್ತದಶಾಂಗುಳಂ ‖ ಪ್ಲವಪ್ರಮಾಣಕಂಪ್ರಾ
ಹಶೌನಕೋಮುನಿಪುಂಗವಃ ‖

ಟೀ। ಮನೆಯ ವಿಸ್ತಾರದ ಸೂತ್ರವನ್ನು ನಾಲ್ಕು ಭಾಗ ಮಾಡಿ ಮತ್ತೊಂದು ಭಾಗವನ್ನು ಕೂಡಿ ಆ ಸೂತ್ರದ ಎರಡು ಕೊನೆಗೂ ಎರಡು ಕಡೆ ಗೋಡೆಗಳ ಮೇಲೆ ಎತ್ತಿ ಹಿಡಿದು ಮಧ್ಯಭಾಗದಲ್ಲಿ ಸೂತ್ರವನ್ನು ಎತ್ತಿದರೆ ಎಷ್ಟು ಪ್ರಮಾಣವೋ ಅದು ಪಾಂಚಾಲವೆಂತಲೂ ಅದರಮೇಲೆ ೩‖ ಅಂಗುಳ ಹೆಚ್ಚಿಸಿದರೆ ವೈದೇಹವಾಟವು ಅದರಮೇಲೆ ೩‖ ಅಂಗುಳ ಹೆಚ್ಚಿಸಿದರೆ ಕೌರವವಾಟವು ಅದರ ಮೇಲೆ ೩‖ ಅಂಗುಳ ಹೆಚ್ಚಿಸಿದರೆ ರಾಜನ್ಯವಾಟವು ಅದರಮೇಲೆ ೩‖ ಅಂಗುಳ ಹೆಚ್ಚಿಸಿದರೆ ಮಾಗಧವಾಟವು ಅದರಮೇಲೆ ೩‖ ಅಂಗುಳ ಹೆಚ್ಚಿಸಿದರೆ ಶೂರಸೇನವಾಟವು ಅದರಮೇಲೆ೩‖ ಅಂಗುಳ ಹೆಚ್ಚಿಸಿದರೆ ಗಾಂಧಾರವಾಟವು, ಅದರಮೇಲೆ ೩‖ ಅಂಗುಳ ಹೆಚ್ಚಿಸಿದರೆ ಅವಂತಿವಾಟವು, ಆಗುವದು ಈ ಹೆಚ್ಚಿಸಿದ ಅಂಗುಳಗಳೆಲ್ಲಾ ೧೭‖ ಆಗುವದು.

## ಈ ವಾಟಗಳಿಗೆ ಪ್ರಯೋಜನ,

ಶ್ಲೋ‖ ದೇವಾಗಾರೇಷ್ವಂತಿಸ್ಯಾದ್ಗಾಂಧಾರಂಹಸ್ತಿನಾಂತಥಾ।ಶೂರ
ಸೇನಂನೃಪಾಣಾಂಚದ್ವಿಜಾನಾಂಮಾಗಧಂತಥಾ । ಕೌರವ್ಯಂವೈಶ್ಯ
ಜಾತೇಸ್ತುಶೂದ್ರೇವೈದೇಹಿಕಂ ತಥಾ । ಪಾಂಚಾಲಕಂಪ್ರಾಕೃತಸ
ಕೌರವಂ ಸರ್ವಜಾತಿಷು ‖

ಟೀ‖ ದೇವಸ್ಥಾನಂಗಳಿಗೆ ಅವಂತಿವಾಟವೂ ಗಜಶಾಲೆಗೆ ಗಾಂಧಾರವಾಟವೂ, ರಾಜರಿಗೆ ಶೂರಸೇನವಾಟವೂ, ಬ್ರಾಹ್ಮಣರಿಗೆ ಮಾಗಧವಾಟವೂ, ವೈಶ್ಯರಿಗೆ ಕೌರವವಾಟವೂ, ಶೂದ್ರರಿಗೆ ವೈದೇಹವಾಟವೂ, ಸಂಕರಜಾತಿಗೆ ಪಾಂಚಾಲವಾಟವೂ, ಯೆಲ್ಲಾ ಜಾತಿಗೂ ಕೌರವ್ಯವಾಟವೂ ಶುಭಕರವಾಗಿರುವದು.

## ಅಂಗುಲಾದಿ ಪ್ರಮಾಣವು,

ಶ್ಲೋ‖ ಜಾಲಾಂತರಗತೇಭಾನೌತಚ್ಯೋಯ್ಯಾದೃಶ್ಯತೇಕಣಃ ‖ ಪರಮಾ
ಣುಸ್ಸುಸೂಕ್ಷ್ಮತ್ವಾದ್ಭಾವಗ್ರಾಹ್ಯೋನೇತ್ರಚಕ್ಷುಷಾ । ತೇಶ್ವಷ್ಟೌತ್ರಸ
ಸರೇಣುಶ್ಚರಥರೇಣುಸ್ತದಷ್ಟಕಂ ।ತದಷ್ಟಕಂತುಲಾಗ್ರಂನಾಧ್ಭವೇಲ್ಲೀ

ಕ್ಷಾತದಷ್ಟಕಂ । ಅಷ್ಟಾಲೀಕ್ಷಾ ಭವೇದ್ಯೂಕಂತದಷ್ಟಾಯವಯಿಾರಿತಃ। ಅಗುಲಂತದ್ಯವಾಶ್ಚಾಷ್ಟಾಪಾದೋರತ್ನಿಷ್ಷಡಂಗುಳಃ । ದೇವಿತಸ್ತಿರರತ್ನಿಸ್ಸ್ಯಾದ್ವಿತಸ್ತಿದ್ವಾರ್ದಶಾಂಗುಳಃ । ಚತುರ್ವಿತಸ್ತಿಃ ಕಿಷ್ಕುಸ್ಸ್ಯಾದ್ವೌಕಿಷ್ಕೂಧನುರಚ್ಯತೇ । ಧನುಸ್ಸಹಸ್ರಂ ಕ್ರೋಶಂಸ್ಯಾದ್ಗವ್ಯೂತಿದ್ವಿಗುಣಂಚತತ್ ಗವ್ಯೂಯಶ್ಚತಸ್ರಸ್ತು ಯೋಜನಂ ಪರಿಭಾಷಿತಂ । ಅಷ್ಟಾಧನು ಸ್ಸಹಸ್ರಾಣಿಯೋಜನಂಪ್ರೋಚ್ಯತೇ ಬುಧೈಃ ॥

ಟೀ॥ ಸೂರ್ಯನು ಬಿಸಲಿನಲ್ಲಿ ಕಾಣುವ ಸೂಕ್ಷ್ಮವಾದ ರೇಣುಗಳಿಗೆ ಕಣಗಳೆಂದು ಹೆಸರು, ಆ ಪರಮಾಣುವುಗಳು ಮನಸ್ಸಿನಿಂದಾ ಭಾವಿಸತಕ್ಕವೆ ಹೊರ್ತು ಕಣ್ಣಿನಿಂದ ನೋಡಲಶಕ್ಯವು ಆ ಪರಮಾಣುಗಳು ೮ ಆದರೆ ತುಲಾಗ್ರ, ಅವು ೮ ಆದರೆ ಲೀಕ್ಷಿ, ಅವು ೮ ಆದರೆ ಯೂಕ, ಅವು ೮ ಆದರೆ ಯವ, ಅವು ೮ ಆದರೆ ಅಂಗುಲ ಅವು ೬ ಆದರೆ ಅರತ್ನಿಯ ನಾಲ್ಕರಲ್ಲಿ ಒಂದುಭಾಗೆ ಅಂದರೆ, ಒಂದು ರತ್ನಿಗೆ ೨೪ ಅಂಗುಳ ಎರಡು ವಿತಸ್ತಿಗಳು ವಂದುರತ್ನಿಗೆ ೧೨ ಅಂಗುಳ ಒಂದು ವಿತಸ್ತಿ ಅವು ೪ ಆದರೆ ಕಿಷ್ಕುವು ಅವು ೨ ಧನಸ್ಸು ಇವು ೧೦೦೦ಕ್ಕೆ ಕ್ರೋಶ ಅವು ೨ ಆದರೆ ಗವ್ಯೂತಿ ಅವು ೪ ಯೋಜನ ೮೦೦೦ ಧನುಸ್ಸುಗಳು ಒಂದು ಯೋಜನ ಈ ಪ್ರಕಾರ ಅಳತೆಯನ್ನು ತಿಳಿಯಬೇಕು.

## ಹ ಸ್ತ ಕ ಲ ಕ್ಷ ಣ ೦.

ಶ್ಲೋ॥ ಅಥಹಸ್ತಂಪ್ರವಕ್ಷ್ಯಾಮಿ ಬ್ರಹ್ಮವಾಸ್ತುವಿಧಾನತಃ। ಶೌನಕಾದಿಋಷಿಪ್ರೋಕ್ತಂಶೀರ್ಷಾದ್ಯಾಪಾರಮಾನಕಂ।ಬ್ರಹ್ಮಸ್ಥಾನಾದಿಕೇಶಾಂತಂಷಟ್ತ್ರಿಂಶದ್ವ್ರೀಹಯಸ್ತಥಾ ಬ್ರಹ್ಮಸ್ಥಾನಾದಿಪಾದಾಂತಂತದ್ಗುಣ್ಯಂವ್ರೀಹಮುಚ್ಯತೇ।ಉಭಯೋರ್ಗಣ್ಯಮಾನೇನವ್ರೀಹಯಸ್ತು ದ್ವಿಸಪ್ತತಿಃ । ನಿಯೋಗಮಂಗಭಾಗೇನತತ್ಸ್ಥಾನಕ್ರಮಾತ್ತಥಾ । ನಿಯೊಜಾಷ್ಟಾವ್ರೀಹಯಶ್ಚ ಕಂಠವಾಳಂ ದ್ವಯಂತಥಾ।ಕಂಧರಾದಿಸ್ತನಾಂತಂಚಮುಖತಾಳಸಮಾಯುತಂ । ಸ್ಥನಾಂತಾನ್ನಾಭಿದೇಶಾಂತಮಷ್ಟಾಚವ್ರೀಹಯಸ್ಸ್ಮೃತಾಃ। ಬ್ರಹ್ಮಾಂಗೇಷ್ಟಾವ್ರೀಹಯಸ್ಸ್ಯಬ್ರಹ್ಮಮೂಲೇದ್ವಿಭಾಗಕಂ ಬ್ರಹ್ಮಮೂಲಾಜ್ಜಾನುದೇಶಂಭಾಗಾಷ್ಷೋಡಶಸಮ್ಮತಾಃ। ಭಾಗದ್ವಯಂತುಜಂಘಾಗ್ರಂಜಂಘಾಮಾ

ನಂತುಷೋಡಶ | ವ್ರೀಹಿದ್ವಯೋತುತತ್ಪಾದಂಹಸ್ತ ಕಂಥ್ಯಸ್ವರೂಪಕಂ||
ಟೀ || ಮನೆಗಳನ್ನು ಕಟ್ಟುವಾಗೆ ಆಯಾ ದಿಕ್ಕುಗಳನ್ನು ತಿಳಿಯುವದಕ್ಕೆ ಹಸ್ತಕಂಬಿಯನ್ನು ಮಾಡಬೇಕು. ಅದರ ಸ್ವರೂಪವಂ ಹೇಳುತ್ತಾನೆ: ೭೨ ಯವೆಗಳನ್ನು ಹಸ್ತಕಂಬಿಯ ಶಿರಸ್ಸು ಮೊದಲು ಪಾದದವರಿವಗೂ ಹಂಚಿದರೆ ಮಧ್ಯಸ್ಥಳ ಮೊದಲುಗೊಂಡು ಕೇಶಗಳ ಪರ್ಯಂತವೂ ೩೬ ಯವೆಗಳು ಪಾದಗಳವರಿಗೂ ೩೬ ಅಂತು ೭೨ ಯವೆಗಳಾಗುತ್ತವೆ, ಹೇಗೆಂದರೆ—೮ ಯವೆಗಳು ಮುಖವೂ ೨ಕೊರಳು,ಆದುದರಿಂದ ಸ್ತನಪರ್ಯಂತವೂ ೮ ಅದರಿಂದಾ ನಾಭಿವರಿವಿಗೂ ೮ ಬ್ರಹ್ಮಾಂಗವಾದ ಮಧ್ಯಪ್ರದೇಶದಲ್ಲಿ ೮ ಮಧ್ಯಮೂಲದಲ್ಲಿ ೨ ತೊಡೆಗಳು ೧೬ ಮೊಣಕಾಲುಗಳು ೨ ಕಣ ಕಾಲುಗಳು ೧೬ ಪಾದಗಳು ೨ ಈ ಪ್ರಕಾರ ೫೨ ಯವೆಗಳನ್ನು ಹಸ್ತಕಂಬಿಯ ಅಂಗಗಳನ್ನಾಗಿ ತಿಳಿಯಬೇಕು.

## ಹಸ್ತಕಂಬಿಯ ಅಂಗಾದಿ ದೇವತೆಗಳು.

ಶ್ಲೋ|| ಅಂಗಾದಿದೇವತಾಃಪ್ರೋಕ್ತಾ ಮುಖವಾಟೀ ಸದಾಶಿವಃ |
ನಕ್ಷತ್ರಮಂಡಲೇಕಂಠಂಸ್ತನಮಧ್ಯೇರ್ಕದೇವತಾ | ಕುಕ್ಷಿಮಧ್ಯೇತದಾ
ವಿಷ್ಣುರ್ವಿಶ್ವಕರ್ಮಾಪ್ರಜಾಪತಿಃ| ಜಾನುಮಧ್ಯೇಶದಾಶಕ್ತಿರ್ಜಂಘಾ
ಗ್ರೇಬ್ರಹ್ಮದೇವತಾ | ಏವಂತಚ್ಚಪ್ರಕಾರೇಣ ಮೂಲೆಗ್ರಂಥೆವಿಧೀ
ಯತೆ ||

ಟೀ|| ಹಸ್ತಕಂಬಿಯ ಅಂಗಾಧಿ ದೇವತೆಗಳನ್ನು ಹೇಳುತ್ತಾನೆ, ಮುಖದಲ್ಲಿ ಈಶ್ವರನೂ ಕಂಠದಲ್ಲಿ ನಕ್ಷತ್ರಮಂಡಲವೂ ಹೃದಯದಲ್ಲಿ ಸೂರ್ಯನೂ, ಹೊಟ್ಟೆಯಲ್ಲಿ ವಿಷ್ಣುವೂ, ವಿಶ್ವಕರ್ಮನೂ, ಪ್ರಜಾಪತಿಯೂ, ಜಾನುಮಧ್ಯದಲ್ಲಿ ಶಕ್ತಿಯೂ, ಕಣಕಾಲುಗಳಲ್ಲಿ ವಾಯುದೇವರೂ ತೊಡೆಗಳಲ್ಲಿ ಭೇತಾಳನೂ, ಪಾದಗಳಲ್ಲಿ ಬ್ರಹ್ಮನೂ ಈ ಪ್ರಕಾರ ಹಸ್ತಕಂಬಿ ಅಂಗಾಧಿ ದೇವತೆಗಳನ್ನು ತಿಳಿದು ಪೂಜಿಸಬೇಕು.

## ಹ ಸ್ತ ಕ ಂ ಬಿ ಯ ಭೇ ದ ಗ ಳು.

ಶ್ಲೋ|| ಲೋಹಂಚಖಾದಿರಂಚೈವ ಶ್ರೀಗಂಧಂವೇಣುಚಂದನಾ | ನಿ
ರ್ಮಾಯಕಂಥ್ಯಮೂಲಾಗ್ರಂವಿಸ್ತಾರಾಂಗುಲಮಾನಕಂ| ತದೇರ್ಧಂ
ಭೂಷಣಂಚೈವ ಚತುರ್ವಿಂಶಾಂಗುಲೋನ್ನತಂ | ಮೂಲೆಚಾಗ್ರೇತ
ಥಾಮಧ್ಯೇ ಹೇಮಸೂತ್ರ ತ್ರಿಬಂಧನಂ | ಅಥವಾತಂತು ಬಂಧಂಚ

ಅಷ್ಟಗಂಧಾನುಲೇಪನಂ । ಗಂಧಪುಷ್ಪಾಕ್ಷತೈರ್ಧೂಪೈರ್ನೈವೇದ್ಯೈ
ಶ್ಚಯಥಾವಿಧಿ । ವಾಸ್ತುದೇವೇಶವಿಘ್ನೇಶವಿಶ್ವಕರ್ಮಾದಿದೇವತಾಃ ।
ನಮಸ್ಕೃತ್ವಾಪ್ರಯತ್ನೇನಕಂಧ್ವಪೂಜಾವಿಧಿಕ್ರಮಾತ್ । ಹಸ್ತಲಕ್ಷ
ಣಆಚಾರ್ಯೋಹಸ್ತಕಂದ್ಯಂಚಧಾರಯೇತ್ । ಅಗ್ರಮಾದಿಕ್ರಮಂಚೈ
ವಗಣ್ಯಮಾನಂವಿಧಿಕ್ರಮಾತ್ । ಶ್ರೀಕರಂಪುತ್ರಲಾಭಂಚಶೋಭನಂ
ಕಾರ್ಯಸಿದ್ಧಿದಂ । ಆಯುರಾರೋಗ್ಯಮೈಶ್ವರ್ಯಂರಾಜಾರಾಷ್ಟ್ರಶುಭಾ
ವಹಂ । ಕಂಧ್ವಮಾನಂವಿನಾಗೇಹೇದೋಷಾಧಿಕ್ಯಂದಿನೇದಿನೇ ॥ ....

ಟೀ॥ ಪಂಚಲೋಹ, ನೆಗ್ಗಿಲು, ಶ್ರೀಗಂಧ, ಬಿದಿರು, ರಕ್ತಚಂದನ, ಇವು ಗಳಲ್ಲೊಂದರಿಂದಾ ೧ ಅಂಗುಲ ಅಗಲವೂ, ॥ ಅಂಗುಲ ದಪ್ಪವೂ, ೨೪ ಅಂ ಗುಲ ಉದ್ದವೂ, ಉಳ್ಳ ಹಸ್ತಕಂಬಿಯನ್ನು ಮಾಡಿ, ಮೊದಲಲ್ಲಿಯೂ ಮಧ್ಯ ದಲ್ಲಿಯೂ, ಕೊನೆಯಲ್ಲಿಯೂ, ಚಿನ್ನ ಕಂಬಿಯಿಂದಲಾದರೂ, ಅರಶಿನ ಧಾ ರದಿಂದಲಾದರೂ, ಮೂರು ಮೂರು ಸುತ್ತು ಸುತ್ತಿ ಅಷ್ಟಗಂಧವಂಲೇಪಿಸಿ ಗಂಧಧೂಪದೀಪ ನೈವೇದ್ಯಾದಿಗಳಿಂದಾ ಪೂಜೆಮಾಡಿ, ವಾಸ್ತು ಪುರುಷ ವಿ ಘ್ನೇಶ ವಿಶ್ವಕರ್ಮ ಮೊದಲಾದ ಅಧಿದೇವತೆಗಳನ್ನು ನಮಸ್ಕರಿಸಿ, ಹಸ್ತದಲ್ಲಿ ಅಮೃತ ರೇಖೆವುಳ್ಳ ಆಚಾರ್ಯನು ಆ ಕೋಲಿನ ಕೊನೆ ಹಿಡಿದುಕೊಂಡು ಮನೆ ಗೆ ಆಯಾದಿಗಳನ್ನರಿಯಬೇಕು. ಹೀಗೆ ಮಾಡುವುದರಿಂದ ಗೃಹಸ್ಥನಿಗೆ ಸಂ ಪತ್ತು ಪುತ್ರವೃದ್ಧಿ ಆಗುವುದಲ್ಲದೆ ರಾಜನಿಗೂ ರಾಷ್ಟ್ರಕ್ಕೂ ಶುಭವುಂಟಾ ಗುವದು. ಈ ಹಸ್ತಕಂಬಿಯಿಲ್ಲದೆ ಇತರ ಸಾಧನೆಗಳಿಂದಾ ಅಳತೆ ಮಾಡಿದರೆ ಆ ಮನೆಯಲ್ಲಿ ಆಗಾಗ್ಯೆ ದೋಷಗಳು ಸಂಭವಿಸುವವು.

## ಮಯಮತಪ್ರಕಾರ ಹಸ್ತಕಂಬಿಲಕ್ಷಣವು,

ಶ್ಲೋ॥ ಹಸ್ತಕಂಧ್ಯಂಪ್ರವಕ್ಷ್ಯಾಮಿಮಾನಂಮಯಮತಂತಥಾ । ಚ
ತುರ್ವಿಂಶಾಂಗುಳಂ ಪ್ರೋಕ್ತಂಚತುರ್ವಿಂಶಾಧಿದೇವತಾಃ । ಪ್ರಥಮಂ
ಮನುರೂಪಂಚದ್ವಿತೀಯಂಮಯರೂಪಕಂ । ತೃತೀಯಂತ್ವಷ್ಟ್ರರೂ
ಪಂಚ ಚತುರ್ಥೇಚಪ್ರಜಾಪತಿಃ । ಪಂಚಮೋವಿಶ್ವಕರ್ಮಾಚಷಷ್ಟ್ಯಸಂ
ಸ್ಕಂಧರೂಪಕಂ । ಸಪ್ತಮಂಗಣನಾಥಶ್ಚ ಅಷ್ಟಮೋತುಸರಸ್ವತೀ ॥ ಶ
ಡಿದಂಬ್ರಹ್ಮಭಾಗಂಸ್ಯಾತ್ಸೃಷ್ಟಿಜನ್ಮಾದಿಭಿಶ್ಶುಭಂ । ಪ್ರಥಮಂವಿಷ್ಣು
ರೂಪಂಚದ್ವಿತೀಯಂತುಸುದರ್ಶನಂ । ಚೇತ್ರಾಳಸ್ಯತೃತೀಯಂಮುಃಶ

ತುರ್ಥಂತಶಕ್ತಿರೂಪಕಂ । ಪಂಚಮಂಗರುಡಂಚೈವಷಷ್ಠರೂಪಂನೃ
ಸಿಹ್ಮಕಂ । ಸಪ್ತಮಂಚಂದ್ರರೂಪಂಚಅಷ್ಟಮಂಮುಷಿರೂಪಕಂ ।ತ
ದಿದಂವಿಷ್ಣುಭಾಗಂಸ್ಯಾಚ್ಛಿಕಿರೂಪಫಲಂಭವೇತ್॥ತತೋಽಪರಿಶಿವಾಂ
ಶೇಸ್ಯುರಂಗಾಧಿಪತಿದೇವತಾಃ । ಪ್ರಥಮಂಶಿವರೂಪಂಚದ್ವಿತೀಯಂ
ತ್ವಗ್ನಿರೂಪಕಂ । ತೃತೀಯಂವಾಯುರೂಪಂಚಚತುರ್ಥಂವಾಸ್ತುದೈ
ವತಂ । ಪಂಚಮಂರುಕ್ಷದೈವತ್ಯಂಷಷ್ಟಮಂಸೂರ್ಯರೂಪಕಂ ।ಸಪ್ತ
ಮಂಭೂತನಾಥಸ್ಯಮೂರ್ತಿತ್ರಯಮಥಾಷ್ಟಮಂ । ತಿರ್ಯಗ್ಯವೋದ
ರಾಣ್ಯಷ್ಟಾವಂಗುಲಂತತ್ತ್ರಿಭಿಃಪದಂ ॥ ಅರ್ಧಂತದ್ವಿಗುಣಂಚೈವವಿತ
ಸ್ತಿಸ್ತದ್ವಯಂಕರಃ ॥ ....

ಟೀ॥ ಮಯಮತಪ್ರಕಾರ ಹಸ್ತ ಕಂಬಿಯನ್ನು ಹೇಳುತ್ತಾ-೨೪ ಅಂಗುಳ ಪ್ರಮಾಣವುಳ್ಳ ಹಸ್ತವನ್ನು ಮೂರುಭಾಗ ಮಾಡಿ, ಪ್ರತಿಭಾಗಕ್ಕೂ ಅಧಿದೇವತೆಗಳನ್ನೇರ್ಪಡಿಸಲು, ೨೪ ಅಧಿದೇವತೆಗಳು ಆದರು ಪ್ರಥಮವಾದ ಬ್ರಹ್ಮಭಾಗಕ್ಕೆ ಮನು, ಮಯ, ತ್ವಷ್ಟೃ ಪ್ರಜಾಪತಿ, ವಿಶ್ವಕರ್ಮ, ಸ್ಕಂದ ವಿಘ್ನೇಶ, ಸರಸ್ವತಿಗಳೆಂಬ ೮ ದೇವತೆಗಳು ಕ್ರಮವಾಗಿ, ಪ್ರತ್ಯಂಗುಲಕ್ಕೂ, ಅಧಿದೇವತೆಗಳು ಎರಡನೆಯದಾದ ವಿಷ್ಣುಭಾಗಕ್ಕೆ ಕ್ರಮವಾಗಿ, ವಿಷ್ಣು, ಸುದರ್ಶನ, ಬೇತಾಳ, ಶಕ್ತಿ, ಗರುಡ, ನೃಸಿಹ್ಮ, ಚಂದ್ರರುಷಿಗಳು. ಮೂರನೆಯದಾದ ಶಿವಭಾಗಕ್ಕೆ ಕ್ರಮವಾಗಿ ಶಿವ, ಅಗ್ನಿ, ವಾಯು, ವಾಸ್ತುದೇವ ನಕ್ಷತ್ರ, ಸೂರ್ಯ, ಭೂತನಾಥ, ಮೂರ್ತಿತ್ರಯ, ಈ ೮ ಅಧಿದೇವತೆಗಳು, ಈ ಪ್ರಕಾರ ಲಕ್ಷಣ ಹೇಳಿ, ಅಂಗುಳ ನಿರ್ಣಯವನ್ನು ಹೇಳುತ್ತಾರೆ-ಎಂಟು ಜವೆಗೋದುವೆಗಳನ್ನು ಅಡ್ಡಲಾಗಿಡಲೂ, ೧ ಅಂಗುಳವಾಗುವದು ಅಂಥಾ ಮೂರಂಗುಳ ಒಂದುಪಾದ ಆ ಪಾದಗಳೆರಡಾದರೆ ಅರ್ಧಹಸ್ತ ಅಥವಾ ವಿತಸ್ತಿಗಳೆರಡಾದರೆ, ಒಂದು ಹಸ್ತ ಅಂತು ೨೪ ಅಂಗುಳವುಳ್ಳದ್ದು ಒಂದು ಹಸ್ತವೆಂದು ಮಯಮತವು.

## ಮತಾಂತರದಲ್ಲಿ ಹಸ್ತಲಕ್ಷಣ,

ಶ್ಲೋ॥ ಷಟ್ಯವೋದರಪಾಚಾರ್ಯಾಸ್ತಿರ್ಯಗೇಕಾಂಗುಲಂಮತಂ ।
ಪಾದಮಷ್ಟಾಂಗುಲಂಚೈವವಿತಸ್ತಿಷ್ಷೋಡಶಾಂಗುಲಂ । ತದ್ವಿತಸ್ತಿ
ದ್ವಯಂಹಸ್ತಮೇವಂಹಸ್ತಪ್ರಮಾಣಕಂ ॥ ದ್ವಾತ್ರಿಂಶದಂಗುಲಂ

ಕಿಷ್ಕುಃಪ್ರಾಜಾಪತ್ಯಂಚತುಸ್ತ್ರಕಂ | ಷಟ್ತ್ರಿಂಶತಿಧನುಃಪ್ರೋಕ್ತಾ
ಅಷ್ಟಮತ್ರಿಂಶದ್ಧನುರ್ಗ್ರಹಂ ||

ಟೀ|| ಆರು ಯವೆಗಳು ಅಡ್ಡಲಾಗಿಟ್ಟರೆ ಒಂದಂಗುಲವಾಗುವದು. ಅಂಥಾ ಅಂಗುಲಗಳು ಎಂಟಾದರೆ ಒಂಡು ಪಾದ ೧೬ ಅಂಗುಲವಾದರೆ ಒಂದು ವಿತಸ್ತಿ ಆ ವಿತಸ್ತಿಗಳೆರಡಾರೆ,--ಒಂಡು ಹಸ್ತ ೩೨ ಆಂಗುಲ ಪ್ರಮಾಣವುಳ್ಳದು. ಕಿಷ್ಕುಹಸ್ತವೆನ್ನಲ್ಪಡುವದು. ೩೪ ಅಂಗುಲವುಳ್ಳದ್ದು ಪ್ರಾಜಾಪತ್ಯ ಹಸ್ತ ೩೬ ವುಳ್ಳದ್ದು, ಧನವು ೩೮ ವುಳ್ಳದ್ದು. ಧನುರ್ಗ್ರಹವೆಂದು ತಿಳಿಯತಕ್ಕದ್ದು.

ಶ್ಲೋ|| ದೇವೇಧನುರ್ಗ್ರಹಂವಿಂದ್ಯಾದ್ಬ್ರಹ್ಮಕ್ಷತ್ರೀಧನುಸ್ತಥಾ| ಪ್ರಾಜಾಪತ್ಯಂಚವಿಟ್ಶೂದ್ರೆಪ್ರಾಕೃತೆಕಿಷ್ಕುರುಚ್ಯತೆ ||

ಟೀ|| ದೇವಸ್ಥಾನಗಳಿಗೆ ಧನುರ್ಗ್ರಹಹಸ್ತದಿಂದಲೂ, ಬ್ರಹ್ಮಕ್ಷತ್ರಿಯರಿಗೆ ಧನುರ್ಹಸ್ತದಿಂದಲೂ, ಇತರ ಸಂಕರಜಾತಿಯವರಿಗೆ ಕಿಷ್ಕುಹಸ್ತದಿಂದಲೂ ಅಳೆಯಬೇಕು. ಈ ಪ್ರಕಾರ ಮಾಡಿದರೆ ದೋಷವಿಲ್ಲವೆಂದು ಮತಾಂತರ ಅಂಗುಲ ಒಂದಕ್ಕೆ ೮ ಯವೆಗಳ ಪ್ರಕಾರ ಹಸ್ತ ೧ಕ್ಕೆ ೨೪ ಅಂಗುಲವಾದರೂ ೬ರಪ್ರಕಾರ ೩೨ ಆದರೂ ಹಸ್ತಪ್ರಮಾಣಕ್ಕೆ ೧೯೨ಕ್ಕೆ ಯವೆಗಳಾಗುವದು ಹ್ಯಾಗಾದರೂ ಸರಿಯೆ.

ಮೇಲೆ ಹೇಳಲ್ಪಟ್ಟ ಈ ಪರಮಾಣ್ವಾದಿ ಹಸ್ತಭೇದಗಳವರಿವಿಗೂ ಇರತಕ್ಕ ವಿಷಯಗಳಿಗೆ ಕಾಮಿಕಾಗಮದಲ್ಲಿ ಸ್ವಲ್ಪ ಭೇದವಿರುವದ್ದರಿಂದ ಅವಶ್ಯಕವಾಗಿ ತಿಳಿಯಬೇಕಾಗಿರುವುದರಿಂದಲೂ ವಿಸ್ತಾರವಾಷರೂ ಬರೆಯಬೇಕಾಯಿತು.

ಶ್ಲೋ|| ಮಾನೋಪಕರಣಂವಕ್ಷ್ಯೇ ಸರ್ವೇಷಾಂಚವಿಶೇಷತಃ || ಪರಮಾಣುಕ್ರಮಾದ್ವೃಧ್ಯಾಮಾನಾಂಗುಳಮಿತಿಸ್ಮೃತಮ್ || ಪರಮಾಣುರಿತಿಖ್ಯಾತೊಯೋಗಿನಾಂದೃಷ್ಟಿಗೋಚರಃ | ರಥರೇಣುಶ್ಚವಾಲಾಗ್ರಂಲೀಕ್ಷಾಯೂಕಾಯವಸ್ತಥಾ || ಕ್ರಮಶೋಷ್ಟಗುಣಾಃಪ್ರೋಕ್ತಾಯವೈಷ್ಷಡ್ಭಿಶ್ಚಸಪ್ತಭಿಃ| ಅಷ್ಟಭಿಶ್ಚಕ್ರಮೆಣೈವಕಸ್ಯಶಾದಿವಿಭೇ

ದತಃ|| ಅಂಗುಳ್ಯಸ್ತ್ರಿವಿಧಾಪ್ರೋಕ್ತಾಯವಾನತ್ಯಷ್ಟಪತಾನನೆ|ಶಾಲಿಭಿಶ್ಚ
ತ್ರಿಭಿನ್ಸ್ವಾದ್ಧ್ಯೈರ್ಷ್ಟತುರ್ಗುಣಿತಾತಥಾಯುತ್ತೈಃ || ಸ್ವಾಂಗುಲ್ಯಗ್ವವಾಸ್ಸವಹಾಖ್ಯಾ
ತಾಸ್ಥಾಂಗುಲಸ್ತ್ರಿವಿಧಸ್ಮೃತಃ||ನಾಡ್ಯೈರ್ಷ್ಟಭಿಬ್ಯವ್ಯೈರ್ಮಾಧನಾಡ್ಯೈರ್ಸ್ಸಪ್ತ
ಭಿರೇವವಾ|| ಅಂಗುಳಾಸ್ತ್ರಿವಿಧಾಃಪ್ರೋಕ್ತಾನ್ಯಾಡ್ಯೈರಷ್ಟಭಿರೇವ
ವಾ | ಮಧ್ಯಮಾಂಗುಳಮಧ್ಯಸ್ಥಪರ್ವದೀರ್ಘಂತುಯದ್ಭವೇತ್||ಶ್ರೇ
ಷ್ಠಂಮಾತ್ರಾಂಗುಳಂಪ್ರೋಕ್ತಂಪಾದಹೀನಂತುಮಧ್ಯಮಮ್ | ಅ
ರ್ಧೇನಮಧಮಂಪ್ರೋಕ್ತಂಮಾತ್ರಾಂಗುಳವಿಭೇದತಃ|ಸವರ್ಧಮಾನ
ಮುದ್ದಿಷ್ಟಂನರಾದ್ಯಂಗುಷ್ಠತೋಪಿವಾ|ಏವಂಮಾತ್ರಾಂಗುಳಂಪ್ರೋ
ಕ್ತಂಯಾಗಾದೀನಾಂಪ್ರಶಸ್ಯತೇ|| ಅಂಗುಲ್ಯೈಸ್ಸೂರ್ಯಸಂಖ್ಯಾತೈರ್ವಿತ
ಸ್ತಿರಿಹಕಥ್ಯತೇ| ತಂತುಪ್ರಾಜಾಪತ್ಯಇತಿಸ್ಮೃತಃ | ಮಾತ್ರೈಸ್ತುಷಡ್ವಿಂ
ಶತಿಭಿಃಧನುರ್ಮುಷ್ಟಿಃಪ್ರಕೀರ್ತಿತಃ || ಸಪ್ತವಿಂಶತಿಭಿರ್ಮಾತ್ರೈಃಧನು
ರ್ಗ್ರಾಹಉದಾಹೃತಃ | ಮಾನಾಂಗುಲೋತ್ಥಹಸ್ತಸ್ತುಶಾಸ್ತ್ರೇ
ಸ್ಮಿನ್ಸಂಪ್ರಕೀರ್ತಿತಾ || ಪೌರುಷಃಪುರುಷಾಜ್ಞಾತಸ್ಸ್ವಾಂಗುಷ್ಠಾಂ
ದ್ದಕ್ಷಿಣಾದಿಹ | ತಲಂಪ್ರನಾರ್ಯಚಾಂಗುಷ್ಠಸಹಿತೈಶ್ಚತುರಂಗುಲ್ಯೈಃ
ಕನಿಷ್ಠಾಂದ್ವಿಕ್ರಮೇಣೈವಯುಪಗೋಕರ್ಣಃ ಸಂಜ್ಞಕೈಃ | ಏವಂವಿ
ವಿಧಉದ್ದಿಷ್ಟೋಹಸ್ತಸ್ಸರ್ವೇಷುವಾಸ್ತುಷು || ಪ್ರಾಜಾಪತ್ಯಸ್ಯ
ಮಾನೇನಮಂಟಪೇವಿಗ್ರಹೇಪಿಚ | ಮಾಲಿಕಾಯಾಂಸಭಾಯಾಂಚವಿ
ಶಾಲಾಯಾಂಚಯೋಜಯೇತ್ || ರಾಜಧಾನ್ಯಾದಿಕಂರಾಜಭವನಂ
ಚತುಷ್ಕಕಮ್|ದುರ್ಗಂಚೈವಧನುರ್ಮುಷ್ಟಿಕರಣೈಶ್ಚೈವಕಾರಯೇತ್||
ಕಿಷ್ಕುಮಾನೇನವೈಸರ್ವಮಾಪನ್ನಸ್ತುಸಮಾಚರೇತ್ | ವಿತಸ್ತಿನಾ
ವಿಧಾತವ್ಯಂಯಾನಂಚಶಯನಂತಥಾ|ಲಿಂಗಂಚಪ್ರತಿಮಾಂಚೈವದ್ವಾ
ರಸ್ತಂಭಂಚಚೂಳಿಕಮ್ | ಯದಸ್ಯಚೋಪಕರಣಂತತ್ಸರ್ವಂಚಾಂ
ಗುಲೈರ್ನತು || ಅತ್ಯಲ್ಪಂತುಯವೇಸ್ಮೈವಮಾಪ್ಯಯಾಸ್ಸಾನವಿತ್ತ್ವೈಃ
ಆಯಾದಿಲಕ್ಷಣಂಚೈವಯೋಭಿರೇವತುಸಜ್ಜಿತಮ್|| ಹಸ್ತೈಶ್ಚತುರ್ಭಿ
ರುದ್ದಿಷ್ಟೈರ್ದಂಡೋರಜ್ಜುಸ್ತುದಶಭಿಃ|ದಂಡೇನಮಾಪಯೇದ್ಗ್ರಾಮಂ
ನಗರಂಪತ್ತನಾದಿಕಮ್|| ಅಧ್ವಾನಂರಜ್ಜುನಾಬಧ್ವಾಕ್ಷೇತ್ರಂಚನತು
ಮಾನಯೇತ್|ರಜ್ಜುಂಕುರ್ಯಾತ್ತುಕಾರ್ಪಾಸಪಟ್ಟಸೂತ್ರಾದಿಭಿರ್ಬು
ಧಃ|ನ್ಯಗ್ರೋಧವಲ್ಕಲಿನಾಥತಾಳಕೇತಕವಲ್ಕಲೈಃ|ಕನಿಷ್ಠಾಂಗುಲನಾ

ಹಾಚತ್ರಿವೃತಾಗ್ರಂಥಿವರ್ಜಿತಾ||ದೇವಿಪ್ರಸೈಮುಹೀಪಾನಾಂವೈಶ್ಯಶೂ
ದ್ರ್ಯರ್ವಿವರ್ಜಿತಾ |' ತಾಲಶ್ಚ ಕೇತಕೀಚೈವನ್ಯಗ್ರೋಧೋಧಾತಕೀ
ತಥಾ| ಶಣಕಂಚಕ್ರಮೇಣೈವವೇಪಾದೀನಾಂಪ್ರಶಂಸಿತಃ|ನಾರಿಕೇಳ
ಸ್ಯಪತ್ರಸ್ಯನೂಪಸಂಸರ್ವಸಿದ್ಧಿದಂ | ಪೂರ್ವೋತ್ತರಮುಖೀನಾಥ
ವ್ಪಾರಂಭೆದಳಸಂಭವೇತ್ | ತಿಸ್ರೈವಮೂಪಸಂಕುರ್ಯಾತ್ಪುತಿಮಾದೌ
ವಿಶೇಷತಃ|| ಸಾರದಾರೂಢ್ಯವೊಹಸ್ತದಂಡೋಗ್ರಂಥ್ಯಾದಿವಿವರ್ಜಿತಃ |
ಸ್ವಾಯತೋದೀರ್ಘಸ್ತ್ವರ್ಧಮಾತ್ರಪ್ರವಿಸ್ತರಃ|| ತತ್ತದರ್ಧಘನೊ
ಪೇತೊವಿಸ್ತಾರೇಣಸಮೊಥವಾ | ಚತುರಶ್ರಾಭವೇದ್ಯಸ್ತು ದಂಡೋ
ಮಾನುಷಕೀರಿತಃ || ಮೂಲೆಸ್ವಯಂಭವಂರೂಪಂಮಧ್ಯೆಲಕ್ಷ್ಮೀಸ್ವ
ರೂಪಕಂ | ವಿಶ್ವಕರ್ಮಸ್ವರೂಪಂಚ ತದಗ್ರೆತುಪ್ರಕಲ್ಪಯೇತ್ |
ಅಯಂದೇವೇಷು ಯೋಗ್ಯಸ್ಸ್ಯ ದ್ದಂಡೋದ್ವ್ಯಂಗುಳ ವಿಸ್ತರಃ |
ಸಪಾದೊಪಾಥನಾಥೋಪಾಸುವೃತಶ್ಚತ್ರಿತೋನುವಾ | ಹೆಮ್ನಾ
ಪಾರಜತೆನಾಥತಾಮ್ರೇಣ್ಯೆ ವಾಯಸಾತಥಾ ||

ತಾ || ನಗರಾದಿಗಳನ್ನು ಗೃಹಾದಿಗೆಳನ್ನು ಆಸನಾದಿಗೆಳನ್ನು ಅಳತೆ ಮಾಡಲಿಕ್ಕೆ ತಕ್ಕ ಸಾಧನೆಗೆಳನ್ನು ಹೇಳುತ್ತೇನೆ ಗವಾಕ್ಷೆಯಲ್ಲಿಸೂರ್ಯನಬಿಸಿಲಿನಲ್ಲಿ ಕಾಣುವ ರೇಣುವು ಪರಮಾಣುವೆನಿಸಿಕೊಂಡು ಯೋಗಿಗಳ ದೃಷ್ಟಿಗೆ ಮಾತ್ರ ಗೋಚರವಾಗಿರುವದು. ಅವು ೮ ಆದರೆ ೧ ರಥರೇಣು; ಅದು ೮ ಆ ೧ ವಾಲಾಗ್ರ; ಅದು ೮ ಆ ಲೀಕ್ಷೆ; ಅವು ೮ ಆ- ೧ ಯೂಕ; ಅವು ೮ ಆ, ೧ ಯವೆ; ಆ ಯವೆಗಳು ೬ ಆದರೆ ಕನಿಷ್ಟಾಂಗುಳವೆಂತಲೂ ಯವ ಸಂಬಂಧವಾದ ಅಂಗುಳವೆಂದು ತಿಳಿಯತಕ್ಕದ್ದು. ಮತ್ತು ಮೂರು ನೆಲ್ಲಿನ ಕಾಳುವುದ್ದವಾಗಿಟ್ಟರೆ ಕನಿಷ್ಟಾಂಗುಳವೆಂತಲೂ ಮೂರೂವರೆ ಇಟ್ಟರೆ ಮಧ್ಯಮಾಂಗುಳವೆಂತಲೂ ನಾಲ್ಕಾದರೆ ಉತ್ತಮಾಂಗುಳವೆಂತಲೂ ಶಾಲಿಸಂಬಂಧವಾದ ಅಂಗುಳಗಳು ಮೂರು ವಿಧಗಳು; ಅಥವಾ ಆರುವರೆ ಯವೆಗಳು ಅಡ್ಡವಾಗಿಟ್ಟರೆ ಕ-[illegible]ಯೆಂತಲೂ ೭|| ಆದರೆ ಮಧ್ಯಮಾಂಗುಳವೆಂತಲೂ ೮|| ಆದರೆ ಉತ್ತಮಾಂಗುಳವೆಂತಲೂ ಮೂರುವಿಧ ಮಾನಾಂಗುಳಗಳು, ಮತ್ತು ನಡುಬೆರಳಿನ ಮಧ್ಯಮ ಪೂರ್ವ ಭಾಗವು ಕಾಲುಪಾಲು ಕಡಮೆಯಾಗಿ ಮಧ್ಯಮಾಂಗುಲವೆಂತಲೂ ಅರ್ಧ ಕಡಮೆಯಾಗಿ ಕನಿಷ್ಟಾಂ

ಗುಲವೆಂತಲೂ, ಪೂರ್ತಿಯಾಗಿ ಉತ್ತಮಾಂಗುಲವೆಂತಲೂ, ಅಥವಾ ಮನುಷ್ಯನ ಹೆಬ್ಬೆಟ್ಟಿನ ಪ್ರಮಾಣದಿಂದಲಾದರೂ ಮಾತ್ರಾಂಗುಲವು ಮೂರು ವಿಧವಾಗಿರುವದು, ಈಪ್ರಕಾರ ಒಂಭತ್ತು ಪ್ರಕಾರವಾಗಿ ಅಂಗುಳಗಳು ಹೇಳಲ್ಪಡುತ್ತೆ, ಈ ಮಾತ್ರಾಂಗುಳವು ಯಜ್ಞಕುಂಡ ಮೊದಲಾದವುಗಳಲ್ಲಿ ವುಪಯೋಗಿಸಲ್ಪಡುತ್ತೆ. ೧೨ ಅಂಗುಳಗಳು ೧ ವಿತಸ್ತಿಯನಲ್ಪಡುವದು. ೨ ವಿತಸ್ತಿಗಳು ಕಿಷ್ಕುವೆಂಬ ೧ ಹಸ್ತವೆಂತಲೂ ೨೬ ಅಂಗುಳಗಳು ಧುರ್ವ ಮುಷ್ಟಿಹಸ್ತವೆಂತಲೂ ೨೭ ಅಂಗುಳಗಳು ಸಧುಗೃಹವೆಂತಲೂ ಪುರುಷನ ಹೆಬ್ಬೆಟ್ಟನಿಂದುಂಟಾದ ಹಸ್ತವು ಪೌರುಷವೆಂತಲೂ ಈ ಪ್ರಕಾರವಾಗಿ ಯೆಲ್ಲಾವಸ್ತುಗಳಲ್ಲಿಯೂ ಅನೇಕ ವಿಧಗಳಾಗಿ ಹಸ್ತನಿರ್ಣಯವಿಧೆಯಂತಲೂ ಪ್ರಾಜಾಪತ್ಯ ಹಸ್ತದಿಂದ ಜನರಿಗೆ ಆಶ್ರಮುವಾದ ಮಂಟಪ, ಮನೆ,ವೂಲಿಕೆ, ಸಭೆ, ಇವುಗಳಲ್ಲಿ ಅಳೆಯಬೇಕೆಂತಲೂ ರಾಜಧಾನಿ, ಅರಮನೆ, ಕೆರೆ, ದುರ್ಗ ಪ್ರಾಕಾರ, ಮಂಚ, ಬಂಡಿ, ಇವುಗಳನ್ನು ಕಿಷ್ಕುಹಸ್ತದಿಂದ ಅಳೆಯಬೇಕೆಂತಲೂ ಅಥವಾ ಎಲ್ಲವೂ ಕಿಷ್ಕುಹಸ್ತದಿಂದ ಅಳೆಯಬಹುದೆಂತಲೂ ಬಂಡಿ, ಮಂಚ,ಲಿಂಗ, ಪ್ರತಿಮೆ, ದ್ವಾರ,ಸ್ತಂಭ, ಇವುಗಳ ಉಪಕರಣಗಳು ವಿತಸ್ತಿಯಿಂದ ಅಳೆಯಬೇಕೆಂತಲೂ, ಕೇವಲ ಅಲ್ಪವಾದವುಗಳನ್ನು ಎಣೆಗೆಳಿಂದ ಅಳೆಯಬೇಕೆಂತಲೂ, ಧ್ವಜಾದ್ಯಾಯಗಳನ್ನು ಹಸ್ತದಿಂದಲೇ ಅಳೆಯಬೇಕೆಂತಲೂ ಮತ್ತು ನಾಲ್ಕು ಹಸ್ತಗಳು ದಂಡವೆಂತಲೂ ೮ ದಂಡಗಳು ರಜ್ಜುವೆಂತಲೂ ದಂಡದಿಂದ ಗ್ರಾಮ ನಗರ ಮೊದಲಾದದ್ದನ್ನು ಅಳೆಯಬೇಕೆಂತಲೂ ಮಾರ್ಗವು, ಕ್ಷೇತ್ರವು ಈ ಮೊದಲಾದ್ದನ್ನು ರಜ್ಜುವಿನಿಂದಾ ಅಳೆಯಬೇಕೆಂತಲೂ ದಾರ, ರೇಷ್ಮೆ, ಆಲದನಾರು, ತಾಳೆನಾರು, ಗೇದಗೆನಾರು, ಇವುಗಳಿಂದಾ ಕಿರಿಬೆರಳಿನ ದಪ್ಪವಾದ ಮುಪ್ಪುರಿಯಾಗಿ ಗಂಟುಗಳಿಲ್ಲದಂತೆ ರಜ್ಜುವನ್ನು ಮಾಡಬೇಕೆಂತಲೂ ತಾಳೆನಾರು, ದೇವತೆಗಳಿಗೂ ಗೇದಗೆನಾರು ಬ್ರಾಹ್ಮಣರಿಗೂ ಆಲದನಾರು ಕ್ಷತ್ರಿಯರಿಗೂ ಅರೆನಾರು ವೈಶ್ಯರಿಗೂ ಸಣಬಿನ ನಾರು ದರಿಪ್ರರಿಗೂ ಯೋಗ್ಯವೆಂಬುದನ್ನು ತೆಂಗಿನನಾರು ಎಲ್ಲರಿಗೂ ಯೋಗ್ಯವೆಂಬುನ್ನು ಪ್ರತಿಮಾದಿಗಳನ್ನು ಅಳತೆ ಮಾಡುವಾಗ ತೆಂಗಿನ ಯೆಲೆಯನ್ನು ಪೂರ್ವೋತ್ತರಮುಖವಾಗಿ ಶೀಳ್ದು ಅಳತೆ ಮಾಡಲು ಸರ್ವಸಿದ್ಧಿಕರವೆಂತಲೂ ಶ್ರೇಷ್ಠವಾದ ಮರದಿಂದ ಗಂಟುಗಳಿಲ್ಲದೆ ಅರ್ಧಾಂಗು

ಳ ವಿಸ್ತಾರವಾಗ್ಯಿ ಅಗಲದಲ್ಲಿ ಅರ್ಧ ದಪ್ಪವಾಗಿಯಾಗಲಿ, ನಾಲ್ಕು ಮೂಲೆಗಳು ಸಮಾನವಾಗಿಯಾಗಲಿ ದಂಡವನ್ನು ಮಾಡಿ ಮೊದಲಿನಲ್ಲಿ ಬ್ರಹ್ಮನನ್ನು ಮಧ್ಯದಲ್ಲಿ ಲಕ್ಷ್ಮಿಯನ್ನು ಅಗ್ರದಲ್ಲಿ ವಿಶ್ವಕರ್ಮನನ್ನು ಅಧಿದೇವತೆಗಳನ್ನಾಗಿ ಮಾಡಿದರೆ ದೈವಯೋಗವೆಂದುನ್ನು, ೨ ಅಂಗುಳ ವಿಸ್ತಾರ ೨| ೨|| ಅಂಗುಳ ಅಗಲವುಂಟಾಗಿ ಚಿತ್ರಿಸಲ್ಪಟ್ಟ ಚಿನ್ನ, ಬೆಳ್ಳಿ, ತಾಂಬ್ರ ಇವುಗಳಲ್ಲೊಂದರಿಂದ ಮೂರು ಸುತ್ತು ಹಾಕಿ ದಂಡವನ್ನು ಮಾಡಬೇಕೆಂಬದಾಗಿ ತಾತ್ಪರ್ಯವು.

## ಏಕಾದಶ ವರ್ಗಕ್ರಮು.

ಶ್ಲೋ|| ಭೂದೀರ್ಘಃಪರಿಣಾಹ ಬಾಹುಗುಣಿತೋ ವಸ್ವಗ್ನಿನಂದಾ
ಷ್ಟಕೈರ್ನಂದಾಷ್ಟಾಭ್ಧಿ ಶರತರ್ಕಭಿಶ್ಚ ಗುಣಿತೋಭಕಾಂತ ವಶೇಷಾಃ ಕ್ರ
ಮಾತ್ | ಮಾರ್ತಾಂಡದ್ವಿಪದಂತಿತಿಥ್ಯಚಲಭಜ್ಯೋತಿರ್ಭಿರುದ್ರ್ಗೃ
ಹೈಸ್ಥಿತ್ವಾಯಾಂ ತಿಥಿವಾರಭಾಗಿಚತಥಾಯೋಗಾರ್ಧತಿಥ್ಯಂಶಕಾಃ||

ಟೀ|| ಮನೆಯ ಉದ್ದಳತೆಯ ಲೆಖ್ಖವನ್ನು ಅಗಲದ ಸಂಖ್ಯೆಯಿಂದ ಗುಣಿತಮಾಡಿ ಆ ಲಬ್ಧವನ್ನು ಪುನಃ ೮ರಿಂದಾ ಗುಣಿಸಿ ೧೨ ರಿಂದಾ ಭಾಗಿಸಲು ಶೇಷಧನ, ಆ ಮೊದಲನೆಯ ಸಂಖ್ಯೆಯನ್ನು ೩ ರಿಂದಾ ಗುಣಿಸಿ ೮ ರಿಂದ ಭಾಗಿಸಿದರೆ ಶೇಷ ಋಣವು, ೯ ರಿಂದಾ ಗುಣಿಸಿ ೮ ರಿಂದಾ ಭಾಗಿಸಲು ಶೇಷವೇ ಧ್ವಜಾದ್ಯಾಯಗಳು. ಮೂಲ ಸಂಖ್ಯೆಯನ್ನು ೮ ರಿಂದಾ ಗುಣಿಸಿ ೩೦ ರಿಂದಾ ಭಾಗಿಸಲು ತಿಥಿ, ೯ ರಿಂದಾ ಗುಣಿಸಿ ೭ ರಿಂದಾ ಭಾಗಿಸಿದರೆ ವಾರಗಳು. ೮ ರಿಂದಾ ಗುಣಿಸಿ ೨೭ ರಿಂದಾ ಭಾಗಿಸಲು ಕ್ರಮವಾಗಿ ನಕ್ಷತ್ರಗಳು, ೪ರಿಂದಾ ಗುಣಿಸಿ ೨೭ ರಿಂದಾ ಭಾಗಿಸಲು ಯೋಗಗಳು ೫ ರಿಂದಾ ಗುಣಿಸಿ ೧೧ ರಿಂದಾ ಭಾಗಿಸಲು ಕರಣ ೬ರಿಂದಾ ಗುಣಿಸಿ ೯ ರಿಂದಾ ಭಾಗಿಸಲು ಅಂಶ ಸಂಖ್ಯೆಯನ್ನು ೯ರಿಂದಾ ಗುಣಿಸಿ ೧೨೦ ರಿಂದಾ ಭಾಗಿಸಲು ಆಯುಸ್ಸು, ಆ ಸಂಖ್ಯೆಯನ್ನು ೮ ರಿಂದಾ ಭಾಗಿಸಲು ಶೇಷ ಇಂದ್ರಾದಿ ದೇವತೆಗಳು ಈ ರೀತಿಯಾಗಿ ಮಾಡುವದರಲ್ಲಿ ಆಯಾದಿ ಸಂಖ್ಯೆಗಳಿಗಿಂತ ಕಮ್ಮಿಯಾದರೆ ಆಯಾಯಾ ಸಂಖ್ಯೆಗಳನ್ನು ಕೂಡಿಸಿ ಪುನಹ ಭಾಗಮಾಡಬೇಕು. ಹ್ಯಾಗೆಂದರೆ ಆಯ ಸಮಯಕ್ಕೆ ಸಂಖ್ಯೆ ನಾಲದಿದ್ದರೆ ೮ನ್ನು ಕೂಡಿಸುವದು, ತಿಥಿಗೆ ಸಾಲದಿದ್ದರೆ ೩೦ ನ್ನು ಕೂಡಿಸುವದು ಹೀಗೆಯೇ ಯೆಲ್ಲಕ್ಕೂ ತಿಳಿಯಬೇಕು.

ಈ ಯೇಕಾದಶ ವರ್ಗಗಳಿಗೂ ಕ್ರಮವಾಗಿ ಫಲಗಳು
ಈ ಕೆಳಗೆ ತಿಳಿಸಲ್ಪಡುತ್ತೆ.

## ೧-೨ ಧನ ಋಣಗಳಿಗೆ ಫಲ.

ಶ್ಲೋ॥ ಧನಾಧಿಕ್ಯಂಋಣಂಸ್ವಲ್ಪಂಧನಧಾನ್ಯಶುಭಪ್ರದಂ ॥ ಋಣಾಧಿಕ್ಯಧನಂಸ್ವಲ್ಪಂರೋಗಂಋಣದರಿದ್ರತಾ ॥

ಟೀ॥ ಕ್ಷೇತ್ರಸಂಖ್ಯೆಯನ್ನು ೮ ರಿಂದಾ ಗುಣಿಸಿ ೧೨ ರಿಂದಾ ಭಾಗಿಸಲಾಗೆ ಬಂದ ಶೇಷವು ಧನವು ಅದು ಋಣಕ್ಕಿಂತಲೂ ಅಧಿಕವಾಗಿದ್ದರೆ ಧನವು ಧಾನ್ಯವು ಉಂಟಾಗಿ ಶುಭಪ್ರದವಾಗಿರುವದು ರುಣವು ಅಧಿಕವಾಗಿ ಧನವು ಸ್ವಲ್ಪವಾದರೆ ರೋಗವು ಸಾಲಮಾಡ್ಲೋಣವುದರಿದ್ರವೂ ವುಂಟಾಗುವದು.

## ೩ ಆಯುಃಗಳ ಫಲ.

ಶ್ಲೋ॥ ಧ್ವಜಾಯುಸ್ಸರ್ವಸೌಭಾಗ್ಯಂಧನಲಾಭಂಜಯಪ್ರದಂ । ಶತ್ರುಕ್ಷಯಂರಾಜಪೂಜ್ಯಮಸ್ಯಚೈವತುಲಕ್ಷಣಂ ॥ ಧೂಮ್ರಾಯೋವ್ಯಾಧಿಪೀಡಾಂಚ ಪತ್ನಿರೋಗಂಭಯಂತಥಾ । ಶತ್ರುವೃದ್ಧಿಕರಂಚೈವಮುತ್ರಮಸ್ಯತುಲಕ್ಷಣಂ ॥೨॥ ಸಿಹ್ಮಾಯೋದೇಹಸೌಖ್ಯಂಚರೋಗನಾಶಂಮಹಾಧನಂ॥ಸಂಗ್ರಾಮೇಜಯಲಾಭಂಚಲಕ್ಷಣಂಪ್ರೋಕ್ತಮಸ್ಯತು॥ ಶ್ವಾನಾಯೋ ರಾಜಕಲಹಂ ಪುರಹಾನಿಸ್ತಥೈವಚ ॥ ಅಗ್ನಿದಗ್ಧಾದಿಧೇಹಸ್ಯಪ್ರೋಕ್ತಮಸ್ಯಚಲಕ್ಷಣಂ ॥ವೃಷಶ್ಚೈವತುಕಲ್ಯಾಣಂಪುತ್ರಾಪದರಣಮೇವಚ ॥ ನಿತ್ಯೋತ್ಸವಂಜಯಂಲಾಭಮಸ್ಯಚೈವತುಲಕ್ಷಣಂ॥೨ ಖರಾಯೋದೇಶಗಮನಂ ರಾಜನಿಗ್ರಹಮೇವಚ। ಸದಾದಾರಿದ್ರ್ಯಸಾಪ್ನೋತೀತ್ಯಸ್ಯಚೈವತುಲಕ್ಷಣಂ॥೬॥ ಗಜೋವೃದ್ಧಿಂಶುಭಂ ಚೈವದ್ವಿಭಾರ್ಯರತ್ನಸಂಗ್ರಹಂ । ಸಂಗ್ರಾಮೇವಿಜಯಾರೋಗ್ಯಮಸ್ಯಚೈವತುಲಕ್ಷಣಂ॥೭॥ವಾಯಸಾಯುಸ್ತು ದುಃಖಂಚಫಲಹೀನಂಬಲಕ್ಷಯಂ । ರೋಗಂಚಕಲಹಂಚೈವ ಮಸ್ಯಲಕ್ಷಣಮೀರಿತಂ॥

ಟೀ ॥ ಧ್ವಜಾದ್ಯಾಯಗಳಿಗೆ ಫಲವನ್ನು ಹೇಳುತ್ತಾನೆ. ಧ್ವಜಾಯುದವುನೆಯು ಸಕಲ ಭಾಗ್ಯವನ್ನು ಧನಲಾಭವನ್ನು ಶತ್ರು ಹಾನಿಯನ್ನು ರಾಜಪೂಜ್ಯತೆಯನ್ನು ಕೊಡುವದು.

ಧೂಮಾಯವು ರೋಗಾದಿಗಳ ಭಯವನ್ನೂ ಹೆಂಡತಿಗೆ ವ್ಯಾಧಿಯನ್ನೂ ಶತ್ರುವೃದ್ಧಿಯನ್ನೂ ಉಂಟುಮಾಡುವದು.

ಸಿಹ್ಮಾಯವು,—ಶರೀರ ಸೌಖ್ಯವನ್ನೂ ರೋಗನಾಶವನ್ನೂ ವಿಶೇಷ ದ್ರವ್ಯವನ್ನೂ ಯುದ್ಧದಲ್ಲಿ ವಿಜಯವನ್ನೂ ಉಂಟುಮಾಡುವದು

ಶುನಕಾಯವು,—ರಾಜರಲ್ಲಿ ಕಲಹವನ್ನೂ ಫಲಹಾನಿಯನ್ನೂ ಬೆಂಕಿಯಿಂದ ಸುಡುವಿಕೆ ಮೊದಲಾದ್ದನ್ನು ಉಂಟುಮಾಡುವದು.

ವೃಷಭಾಯವು,—ಶುಭವನ್ನೂ ಪುತ್ರಲಾಭವನ್ನೂ ನಿರಂತರವೂ ಶುಭಕಾರ್ಯಗಳನ್ನೂ ಜಯವನ್ನೂ ಉಂಟುಮಾಡುವದು

ಖರಾಯವು,—ಪರದೇಶಗಳಿಗೆ ಹೋಗೋಣವನ್ನೂ ರಾಜರಿಂದಾ ನಿಗ್ರಹಿಸಲ್ಪಡುವಿಕೆಯನ್ನೂ ಯಾವಾಗ್ಯೂ ಉಂಟುಮಾಡುವದು.

ಗಜಾಯವು,—ವೃದ್ಧಿಯನ್ನೂ ಶುಭವನ್ನೂ ದ್ವಿಭಾರ್ಯಾಸಂಗ್ರಹವನ್ನೂ ರತ್ನಲಾಭವನ್ನೂ ಕಲಹದಲ್ಲಿ ಜಯವನ್ನೂ ಆರೋಗ್ಯವನ್ನೂ ಉಂಟುಮಾಡುವದು.

ವಾಯಸಾಯವು,—ದುಃಖವನ್ನೂ ಫಲಾಭಾವವನ್ನೂ ದುರ್ಬಲವನ್ನೂ ರೋಗವನ್ನೂ ಕಲಹವನ್ನೂ ಉಂಟುಮಾಡುವದು.

ಈ ಧ್ವಜಾದ್ಯಾಯಗಳಿಗೆ ಪ್ರಕಾರಾಂತರ ಮಾನವನ್ನು ಕಾಲಾಮೃತದಲ್ಲಿ ಹೇಳಿರುತ್ತಾರೆ, ಹ್ಯಾಗೆಂದರೆ ಶ್ಲೋ|| ಪಾದಾಧಿಕ್ಯೇ ಧ್ವಜೋಯದಿಗಜಃ ಪಾದೇನಹೀನಸ್ಸಮಃ, ಪಾದೋನೋವಿಷಮೋಹರಿಸ್ತ್ವಿಷಮಸ್ಸ್ಯಾಂಶ್ವ್ರಪೂರ್ಣವಾಯಸೋಭವೇತ್| ಧ್ವಾಂಕ್ಷಾಯಸ್ತುಭವೇಚ್ಚ ಕೇವಲಸಮಸ್ಸ್ಯಾದ್ಧರ್ಮಸಮಾಯಃಖರಃ ಶ್ವಾಯಸ್ಸ್ಯಾದ್ವಿಷಮಸ್ತುಸಾರ್ಧಸುಸಮೋಧೂಮಸ್ತ್ವದಿಷ್ಟ್ಯರ್ಧದಾಃ|| ತಾ|| ಮನೆಯನ್ನು ಕಟ್ಟುವದಕ್ಕೆಯೋಗ್ರಡಿಸಿದ ನಿವೇಶನದ ಉದ್ದವನ್ನು ಅಳತೆಮಾಡಲಾಗಿ ಆ ಸಂಖ್ಯೆಯು ಹಾಗೆವಾಲು ಅಧಿಕವಾಗಿ ಸಮಸಂಖ್ಯೆಯುಳ್ಳದ್ದಾಗಿದ್ದರೆ ಗಜಾಯವೆಂತಲೂ, ಹೆಚ್ಚು ಕಮ್ಮಿಗಳಿಲ್ಲದೆ ಸಮಸಂಖ್ಯೆಯಾಗಿದ್ದರೆ ಕಾಕಾಯವೆಂತಲೂ, ಅರ್ಧ ಅಧಿಕವಾಗಿ ವಿಷಮ ಸಂಖ್ಯೆಯಾದರೆ ಖರಾಯವೆಂತಲೂ, ಕೇವಲವಿಷಮ ಸಂಖ್ಯೆಯಾದರೆ ಶುನಕಾಯವೆಂತಲೂ, ಅರ್ಧಅಧಿಕವಾಗಿಸಮಸಂಖ್ಯೆಯಾದರೆ,-ಧೂಮಾಯವೆಂತಲೂ, ಈ ಆಯಗಳೆಲ್ಲಕ್ಕೂ, ಅಗಲಳತೆಯು ಚತುಸ್ಸಂಖ್ಯಾಕ

ವಾಗಿರಬೇಕೆಂತಲೂ ಇವು ತಮ್ಮ ತಮ್ಮ ದಿಕ್ಕುಗಳಲ್ಲಿ ಶುಭಕರಗಳೆಂತಲೂ, ತಿಳಿಯತಕ್ಕದು.

ತಿ ಧಿ ಫ ಲ.

ಕಾಲಾಮೃತದಲ್ಲಿ, ॥ಶ್ಲೋ॥ ರಿಕ್ತಾತಿಶೂನ್ಯಕರಾಲಿಮಾನಿಧನದಾವಮಾಸಾದಿರಾರ್ತಿಪ್ರದಾ ತಚ್ಛೇಷಾಸ್ತಿಥಯಶ್ಶುಭಾಗೃಹಪತೇಃ ॥ ಯೆಂದು ಹೇಳಿರುವದ್ದರಿಂದ ರಿಕ್ತತಿಥಿಗಳು ನಾಶಕರಗಳಾದ್ದರಿಂದಲೂ, ಅಮಾವಾಸ್ಯೆಯು ಮರಣವನ್ನುಂಟುಮಾಡುವದರಿಂದಲೂ, ಶುಕ್ಲಪಕ್ಷದ ಪಾಡ್ಯಮಿಯು ದುಃಖವನ್ನು ಕೊಡುವದ್ದರಿಂದಲೂ, ಈ ದಿವಸಗಳನ್ನು ಬಿಟ್ಟು ಮಿಕ್ಕ ತಿಥಿಗಳಲ್ಲಿ ಮನೆ ಕಟ್ಟಬೇಕು. ವಾರ ಫಲಗಳು ಮೊದಲೇ ಹೇಳಲ್ಪಟ್ಟದೆ.

## ನಕ್ಷತ್ರ ಫಲವನ್ನು ಹೇಳುತ್ತೇನೆ.



ಕಾಲಾಮೃತದಲ್ಲಿ ॥ಶ್ಲೋ॥ ಆತ್ಮರ್ಕ್ಷಾದ್ಗೃಹಭಾಂತಮೇವಗಣಯೇತ್ತದ್ವಚ್ಚತಾರಾಬಲಂಚಾತ್ಮರ್ಕ್ಷಂ ಗೃಹಭಂಯದೇಕಮಶುಭಂತಾರ್ತೀಯಭಂ ಸ್ವರ್ಕ್ಷಯೇಃ । ದುಃಖಂಸ್ಯಾದ್ವದಿಪಂಚಮಂ ನಿಧನದ್ಧಂಕರ್ತುರ್ಭವೇಸ್ಸಪ್ತಮಂಕ್ಷೇತ್ರೇಪುತ್ರಕರಾಸ್ಸದಾಗೃಹಪತೇರೇವೇತರಸ್ತಾರಕಾಃ॥ ಯೆಂದು ಇರುವದ್ದರಿಂದಾ ಗೃಹಪತಿಯ ಜನ್ಮನಕ್ಷತ್ರ ಮೊದಲು ಮಾಡಿಕೊಂಡು (ನಿತ್ಯ)ನಕ್ಷತ್ರದವರಿಗೂ ಯೆಣಿಸಿ ಆ ಸಂಖ್ಯೆಯನ್ನು ೯ ರಿಂದಾ ಭಾಗಿಸಿದರೆ, ತನ್ನ ನಕ್ಷತ್ರವೂ ಗಣಿತದಿಂದ ಬಂದ ಮನೆಯ ನಕ್ಷತ್ರವೂ ಒಂದೇ ಆದರೆ ಅಶುಭ, ಆತ್ಮನಕ್ಷತ್ರಕ್ಕೆ ೩ನೇದಾದರೆ, ಕ್ಷಯ, ೫ನೆದಾದರೆ, ದುಃಖ, ೭ನೇದಾದರೆ, ಮರಣ ೦-೬-೮-೯ ಆದರೆ, ಪುತ್ರ ಸಂಪತ್ತುಂಟಾಗುವದು.

ರಾ ಶಿ ಫ ಲ .

ಶ್ಲೋ ॥ ರಾಶ್ಯಂತಂಗಣಯೇದ್ಗೃಹಸ್ಯಗೃಹಿಣೋರಾಶ್ಯಾದಿತತ್ತತ್ಫಲಂ ನಿಸ್ಸಂತಾನಕರಂತ್ರಿಕೋಣನಿಲಯಂ ದ್ವಿದ್ವಾರ್ವಶೋನರ್ಥಕೃತ್ ॥ ವಷ್ಠಾಷ್ಟಾಖ್ಯಗೃಹಂಸದಾಕಲಹದಂಚಾಸ್ಯೈತ್ಸುಭಾರಾಶಯೋರ್ದಂಪತ್ಯೋರಪಿಯತ್ಫಲಂ ಪರಿಣಯೇಕರ್ತುರ್ಗೃಹೇತತ್ಫಲಂ ॥

ಟೀ॥ ಯಜಮಾನನ ಜನ್ಮರಾಶಿ ಮೊದಲು ಗೃಹರಾಶಿಯವರಿವಿಗೂ ಯೆಣಿಸಲಾಗಿ, ಗೃಹರಾಶಿಯು ೫—೯ನೇದಾದರೆ, ಸಂತಾನವಿಲ್ಲ ೨—೧೨ನೇ

ದಾದರೆ ಪೀಡೆಯನ್ನುಂಟುಮಾಡುವದು, ೬—೮ ಆದರೆ, ಕಲಹವನ್ನುಂಟು ಮಾಡುವದು ಮಿಕ್ಕವೆಲ್ಲಾ, ಶುಭಕರಗಳು ವಿವಾಹಕಾಲದಲ್ಲಿ ದಂಪತಿಗಳಿಗೆ ಯಾವಯಾವ ಫಲವು ಹೇಳಲ್ಪಟ್ಟಿದೆಯೋ? ಅವೆಲ್ಲವೂ, ಮನೆಗೂ ಮನೆ ಯಜಮಾನನಿಗೂ. ನೋಡತಕ್ಕದ್ದು. ಆದರೆ ನಾಡಿ ಮಾತ್ರ ಬೇರೆವಿಧದಿಂದ ನೋಡತಕ್ಕದ್ದು ಗರ್ಗನು ಹೇಳುತ್ತಾನೆ.

ಶ್ಲೋ॥ ಪ್ರಭುಃಪಣ್ಯಾಂಗನಾಮಿತ್ರಂದೇಶೋಗ್ರಾಮಂಪುರಂಗೃಹಂ। ಏಕನಾಡೀಸ್ಥಿತಂ ಭವ್ಯಂ ವಿರುದ್ಧೆವೇದವರ್ಜಿತಂ ॥ ಮತ್ತು ಜ್ಯೋತಿಸ್ಸಾಗರದಲ್ಲಿ ॥ ಶ್ಲೋ ॥ ಸೇವ್ಯಸೇವಕಯೋಶ್ಚೈವಗೃಹತತ್ಸ್ವಾಮಿನೋರಪಿ। ಪರಸ್ಪರಂಮಿತ್ರಯೋಶ್ಚ ಏಕನಾಡೀಪ್ರಶಸ್ಯತೇ। ರಾಜನಿಗೂ, ಸೇವಕನಿಗೊ ವಿಟನಿಗೂ, ನಾಯಕಿಗೂ, ಸ್ನೇಹಿತರಿಗೂ, ದೇಶಕ್ಕೂ, ಗ್ರಾಮಕ್ಕೂ, ಪಟ್ಟಣಕ್ಕೂ ಗೃಹಕ್ಕೂ, ಏಕನಾಡಿ ಆದರೆ, ಶುಭವು.

## ಯೋಗಫಲ ಕರಣ ಫಲ.

ಶ್ಲೋ ॥ ವಿಷ್ಕಂಭಂಪ್ರೀತಿರಾಯುಷ್ಮಾನ್ಸೌಭಾಗ್ಯಂಶೋಭನಂತಥಾ। ಅತಿಗಂಡಂಸುಕರ್ಮಾಚಧೃತಿಶ್ಶೂಲಸ್ತಥೈವಚ। ಗಂಡೋವೃದ್ಧಿರ್ಧ್ರುವಶ್ಚೈವ ವ್ಯಾಘಾತೋಹರ್ಷಣಸ್ತಥಾ॥ ವಜ್ರಂಸಿದ್ಧಿರ್ವ್ಯತೀಪಾತೋವರೀಯಾನ್ಪರಿಘಶ್ಶಿವಂ।ಸಿದ್ಧಂಸಾಧ್ಯಂಶುಭಂಶುಕ್ಲಂಬ್ರಹ್ಮಐಂದ್ರಂಚವೈಧೃತಿಃ॥ ಟೀ ॥ ಈ ೭ ಯೋಗಗಳಲ್ಲಿ, ವಜ್ರ, ವ್ಯಾಘಾತ, ವಿಷ್ಕಂಭ—ಶೂಲ ಗಂಡ ವೈಧೃತೀಪಾತ ಪರಿಘ ಇವುಗಳಲ್ಲಿ ಮನೆಯನ್ನು ಕಟ್ಟಬಾರದು ಮತ್ತು ಬವ ಮೊದಲಾದ, ೫ ಕರಣಗಳು ಶುಭ ಪ್ರದಗಳು ಮಿಕ್ಕವುಗಳು ಅಶುಭಗಳು

## ಅಂಶಫಲ.

ಶ್ಲೋ॥ ನಷ್ಟೋವೃದ್ಧಿಶ್ಶ್ರಿಯಶ್ಚೈವ ತಾಪೋಮರಣ ಚೋರತೆ।
ಸಂತಾನಂಗೋಕುಲಂತುಷ್ಟಿಂಗ್ರಹಾಂಶಾಃಪರಿಕೀರ್ತಿತಾಃ॥

ಟೀ॥ ಗಣಿತಮಾಡಿದ್ದರಲ್ಲಿ ಯೇರ್ಪಟ್ಟ ಅಂಶಗಳಿಗೆ ಫಲಗಳು ಕ್ರಮವಾಗಿ, ೧ಕ್ಕೆ ನಾಶನವು-೨ಕ್ಕೆ ವೃದ್ಧಿ,೩ಕ್ಕೆ ಸಂಪತ್ತು, ೪ಕ್ಕೆ ದುಃಖ, ೫ಕ್ಕೆ ಮೃತಿ, ೬ಕ್ಕೆ ಚೋರಭಯ- ೭ಕ್ಕೆ ಸಂತಾನ, ೮ಕ್ಕೆ ಪಶುವೃದ್ಧಿ, ೯ಕ್ಕೆ ತೃಪ್ತಿಯು ಉಂಟಾಗಿರುವುದು.

## ಆಯುಸ್ಸಿನಫಲ ಇಂದ್ರಾದಿ ದಿಕ್ಪತಿಫಲ.

ಕಾ॥ಶ್ಲೋ॥ ಆಯುಷ್ಯಷಷ್ಟ್ಯಧಿಕಂಶುಭಂಗೃಹಪತೇರ್ಹೀನೇಶುಹಾನಿ

ಪ್ರದಂ । ಸೌಭಾಗ್ಯಂ ಸುರರಾಟ್ಸ್ವಗ್ನಿರ್ಹಸ್ಯದಹನಂ ಪಶ್ಚಿನ್ನಿರ್ಋತಿರ್ಮೋಕ
ಮಂಗಳಂ॥ ರಕ್ಷಶ್ಯತ್ರುಭಯಂಪಶುಂಜಲಪತಿಃ ಕುರ್ಯಾಸ್ಥಿರುಚ್ಚಂ
ಚಲಂಧಾನ್ಯಂಯಕ್ಷಪತಿಶ್ಶಿವಶ್ಶಿವಮಿದಂ ಸ್ಯಾದ್ದಿಕ್ಪತೀನಾಂಫಲಂ ॥

ಟೀ॥ ಗಣಿತದಿಂದ ಉಂಟಾದ ಆಯುಸ್ಸಂಖ್ಯೆಯು ೬ಂಕ್ಕೆ ಹೆಚ್ಚಾಗಿದ್ದರೆ ಗೃಹಪತಿಗೆ ಶುಭಕರವಾಗುವದು ಅದಕ್ಕೆ ಕಮ್ಮಿ ಆದರೆ ಹಾನಿ ಉಂಟಾಗುವದು. ದಿಕ್ಪತಿಗಳ ಫಲ ೧ ಇಂದ್ರ ಸೌಭಾಗ್ಯವಂ ಕೊಡುವನು. ೨ಕ್ಕೆ ಅಗ್ನಿ ಮನೆಯಂ ಸುಡುವನು, ೩ಕ್ಕೆ ಯಮ ಅಶುಭವಂ ಕೊಡುವನು, ೪ಕ್ಕೆ ನಿಋಋತಿ ಶತ್ರುವನ್ನುಂಟುಮಾಡುವನು, ೫ಕ್ಕೆ ವರುಣ, ಪಶುವೃದ್ಧಿಯನ್ನು, ಮಾಡುವನು ೬ಕ್ಕೆ, ವಾಯುವು ಸ್ಥಾನ ಭ್ರಷ್ಟತ್ವವಂಟು ಮಾಡುವನು, ೭ಕ್ಕೆ ಕುಬೇರ ಧಾನ್ಯಲಾಭ ವುಂಟುಮಾಡುವನು, ೮ ಕ್ಕೆ ಈಶಾನನು ಮಂಗಳವನ್ನುಂಟುಮಾಡುವನು.

ಬಾಲ್ಯ ಯೌವನ ಕೌಮಾರಗಳ ಫಲ.

ಶ್ಲೋ॥ ವಯೋಭಾಗಂಗೃಹಂಕುರ್ಯಾತ್ಪರ್ಯಾಭಾಗಂಚತುರ್ವಿಧಂ ।
ಬಾಲ್ಯಯೌವನಕೌಮಾರೌವಾರ್ಧಿಕ್ಯಂಶೇಷತಃ ಕ್ರಮಾತ್ ॥

ಟೀ॥ ಗಣಿತದಿಂದ ಏರ್ಪಟ್ಟ ಆ ಸಂಖ್ಯೆಯನ್ನು ೪ರಿಂದ ಭಾಗಿಸಲಾಗಿ ಶೇಷ ಒಂದು ನಿಂತರೆ ಬಾಲ್ಯ, ೨ ನಿಂತರೆ ಯೌವನ, ೩ ನಿಂತರೆ ಕೌಮಾರ ಶೇಷವಿಲ್ಲದಿದ್ದರೆ ವಾರ್ಧಿಕ್ಯ, ಇವುಗಳಲ್ಲಿ ಬಾಲ್ಯವು ವುತ್ತಮವಾಗಿಯೂ, ಯೌವನವು ಮಧ್ಯಮವಾಗಿಯೂ ಇರುತ್ತದೆ ಕೌಮಾರವು ವೃದ್ಧತ್ವವೂ ಕೂಡದು.

ಗುಣ ಫಲ.

ಶ್ಲೋ॥ ಇಂದ್ರಾದಿದೇವತಾಗಣ್ಯಂ ತದಂಶಂಗುಣಿತಂಪದಂ। ತ್ರಿಭಾಗಂಭಾಗಶೇಷಂಚಗುಣಾಸ್ಸತ್ವಂರಜಸ್ತಮಃ ॥

ಟೀ॥ ಇಂದ್ರಾದಿ ದೇವತೆಗಳನ್ನು ೮ ರಿಂದ ಭಾಗಿಸಲಾಗಿ ಶೇಷ ೧ಕ್ಕೆ ಸತ್ವಗುಣ, ೨ಕ್ಕೆ ರಜೋಗುಣ, ೩ಕ್ಕೆ ತಮೋಗುಣ, ಉತ್ತಮಮಧ್ಯಮ ಅಧಮಗಳಾಗಿರುತ್ತವೆ.

ಗೃಹೋನ್ನತಕ್ಕೆ ಆಯಗಳು.

ಶ್ಲೋ॥ ಪಂಶಾಗ್ರಾದ್ವಜಮೂಲಾಶ್ಚ ಮಾನಯೋರ್ದ್ವಪ್ರಮಾಣತಃ
ಸ್ಯಾದ್ಧ್ಯಂಗುಳಪ್ರಮಾಣೇನಧ್ವಜಾದ್ಯಾಯಾಃಪ್ರಕೀರ್ತಿತಾಃ ॥

ಟೀ॥ ಮನೆಯ ಉನ್ನತಕ್ಕೆ ಆಯಗಳನ್ನು ತರಬೇಕಾದರೆ ಆ ತೊಲೆಯ

ಪೋಟಗೆ ಬೆನ್ನು ಮರದಿಂದಾಗಲಿ ಮರದ ಕೆಳಕ್ಕಾದರು ತೊಲೆಯು ಬೆನ್ನಿನಿಂದಲಾದರೂ ಸೂತ್ರವನ್ನುಕೆಳಗಿನೆಪರಿವಿಗೂ ಬಿಟ್ಟು ಮನೆಯು ಯಜಮಾನನ ಹೆಬ್ಬೆಟ್ಟಿನ ಪ್ರಮಾಣದಿಂದ ಅಳತೆಮಾಡಿ ಆ ಲೆಖ್ಖವನ್ನು ೭ ರಿಂದ ಭಾಗಿಸಲಾಗಿ ಕ್ರಮವಾಗಿ ಧ್ವಜಾದ್ಯಾಯಗಳಾಗುವವು.

## ಅಷ್ಟಗೃಹಗಳ ಲಕ್ಷಣ.

ಶ್ಲೋ ॥ ಸ್ನಾನಾಗಾರಂದಿಶಿಪ್ರಾಚ್ಯಾಮಾಗ್ನೇಯ್ಯಾಂಪಚನಾಲಯಂ । ದಕ್ಷಿಣೆಶಯನಾಗಾರಂನ್ಯೈರುತ್ಯಾಂ ಶಸ್ತ್ರಮಂದಿರಂ । ಪಶ್ಚಿಮೇ ಭೋಜನಾಗಾರಂವಾಯುವ್ಯೇ ಪಶುಮಂದಿರಂ । ಭಂಡಾರಂಚೋತ್ತರಸ್ಯಾಂತು ಈಶಾನ್ಯಂದೇವಮಂದಿರಂ ॥

ಟೀ॥ ಪ್ರಧಾನ ಗೃಹಕ್ಕೆ ಸುತ್ತು ಎಂಟು ದಿಕ್ಕುಗಳಲ್ಲಾಗಲಿ ಅಥವಾ ಮುಖ್ಯಗೃಹದಲ್ಲೇ ಆಗಲಿ ಪೂರ್ವದಿಕ್ಕಿನಲ್ಲಿ ಧ್ವಜಾಯದಿಂದ ಸ್ನಾನದ ಮನೆಯೂ, ಅಗ್ನಿ ಕೋಣದಲ್ಲಿ ಧೂಮಾಯದಿಂದ ಅಡಿಗೆಮನೆಯೂ,ದಕ್ಷಿಣದಲ್ಲಿ ಸಿಹ್ಮಾಯದಿಂದ ಮಲಗುವ ಮನೆಯೂ, ನೈರುತ್ಯದಲ್ಲಿ ಶುನಕಾಯದಿಂದ ಆಯುಧಗಳ ಮನೆಯೂ, ಪಶ್ಚಿಮದಲ್ಲಿ ವೃಷಭಾಯದಿಂದ ಊಟಮಾಡುವ ಮನೆಯೂ, ವಾಯುಕೋಣೆಯಲ್ಲಿ ಖರಾಯದಿಂದ ಪಶುಶಾಲೆಯೂ, ಉತ್ತರದಿಕ್ಕಿನಲ್ಲಿ ಗಜಾಯದಿಂದ ಬೊಕ್ಕಸದ ಮನೆಯೂ, ಈಶಾನ್ಯಕೋಣೆಯಲ್ಲಿ ವಾಯಸಾಯದಿಂದ ದೇವರ ಮನೆಯೂ,ಕಟ್ಟದರೆ ಶುಭವಾಗಿರುವದು. ಹೀಗೆ ಸಾಮಾನ್ಯವಾಗಿ ಗೃಹಗಳನ್ನು ಹೇಳಿ ರಾಜರ ಅರಮನೆಗಳಿಗೆ ವಿಶೇಷವನ್ನು ಹೇಳುತ್ತಾನೆ, ಕಾಲಾಮೃತದಲ್ಲಿ.

ಶ್ಲೋ ॥ ಇಂದ್ರಾಗ್ನ್ಯೋಃರಥಮಂಧನಸ್ಯಸದನಂಘಾತಂಯಮಾಗ್ನ್ಯೋಃಶಿರ್ಗೃಹಂದ್ವೈತೇಯಾಂತಕಯೋಃಪುರೀಷಸದನಂವಿದ್ಯಾಗೃಹಂಮಧ್ಯಮೆ । ರಕ್ಷೋವಾರಣಯೋಶ್ಚದರುನಗೃಹಂ ತೋಯೆರೇಶಪಾಯುವ್ಯಯೋಮಧ್ಯೇ ಕಾಮಗೃಹಂಕುಬೇರಮರುತೋಃ ಕುರ್ಯಾತ್ಸದಾಭೂಪತಿಃ ॥ ಕೌಭೇರೀಶ್ವರಯೋಶ್ಚ ವೈದ್ಯಭವನಂಶಾಕ್ರೇಶಯೋಸ್ಸಾತಿ । ಕಂಜ್ಯೇಷ್ಠಭ್ರಾತೃಪಿತೃವ್ಯಮಾತೃಭವನಂ ತಸ್ಮಾದ್ಯಮೇಪಶ್ಚಿಮೇ । ಶಾಲಾನಾಮುಪರಿಸ್ಥಿತೇಷುಭವನೇಷ್ವೇವಂ ವಿಚಿಂತ್ಯಂಬುಧೈರತ್ಯುಚ್ಚಂ । ನಹಿನಾತಿನೀಚಮಥವಾನಾನ್ಯಂಗೃಹಂಕಾರಯೇತ್ ॥

ಅಂದರೆ,—ಪೂರ್ವಕ್ಕೂ ಆಗ್ನೇಯಕ್ಕೂ ಮಧ್ಯದಲ್ಲಿ ಮೊಸರುಕಡೆಯುವ ಮನೆಯೂ, ಆಗ್ನೇಯಕ್ಕೂ ನಡುವೆ ಧಾನ್ಯ ಕಟ್ಟುವ ಮನೆಯೂ, ಆಗ್ನೇಯಕ್ಕೂ ದಕ್ಷಿಣಕ್ಕೂ ನೈರುತ ಕ್ಕೂಮಧ್ಯದಲ್ಲಿ ಮೂತ್ರಪುರೀಷಾದ್ಯುತ್ಸರ್ಜನದ ಮನೆಯೂ, ನಿಋುಋುತಿ ಪಶ್ಚಿಮಗಳಿಗೆ ಮಧ್ಯೆ ವಿದ್ಯಾಭ್ಯಾಸ ಗೃಹವೂ, ಪಶ್ಚಿಮ ವಾಯುವ್ಯಗಳ ನಡುವೆ ದುಃಖಿಸುವ ಗೃಹವೂ, ವಾಯುವ್ಯಕ್ಕೂ ಉತ್ತರಕ್ಕೂ ನಡುವೆ ಕ್ರೀಡಾಗೃಹವೂ, ಉತ್ತರಕ್ಕೂ ಈಶಾನ್ಯಕ್ಕೂ ನಡುವೆ ವೈದ್ಯಶಾಲೆಯೂ, ಈಶಾನ್ಯಕ್ಕೂ ಪೂರ್ವಕ್ಕೂ ಮಧ್ಯದಲ್ಲಿ ಪ್ರಸವದ ಮನಯೂ ಯೇರ್ಪಡಿಸಬೇಕೆಂತಲೂ, ಮುಖ್ಯ ಗೃಹಕ್ಕೆ ದಕ್ಷಿಣದಲ್ಲಾಗಲಿ ಪಶ್ಚಿಮದಲ್ಲಾಗಲಿ ದೊಡ್ಡಪ್ಪ, ಚಿಕ್ಕಪ್ಪ, ತಾಯಿ ಮೊದಲಾದವರಿರುವ ಮನೆಗಳನ್ನು ಏರ್ಪಡಿಸಬೇಕೆಂತಲೂ ಮಹಡಿಕಟ್ಟಬೇಕಾದರೂ ಪೂರ್ವದಂತೆ ಆಯ ಮೊದಲಾದವುಗಳನ್ನಾಲೋಚಿಸಬೇಕೆಂತಲೂ, ಬಹಳ ತಗ್ಗಾಗಲಿ, ಎತ್ತರವಾಗಿಯಾಗಲಿ ಇರದೆ ಸಮವಾಗಿರಬೇಕೆಂದು ತಾತ್ಪರ್ಯವು ಇಲ್ಲಿ ಧ್ವಜ, ವೃಷಭ, ಸಿಹ್ಮ, ಈ ೪ ಆಯಗಳು ಪ್ರಶಸ್ತಗಳಾಗಿಯೂ, ಧೂಮ, ಶ್ವಾನ, ಖರ, ವಾಯಸಾಯಗಳು ಕೆಟ್ಟವುಗಳಾಗಿದ್ದರೂ (ಪೂರ್ವಾದಿ ಧ್ವಜೆಧೂಮಸಿಂಹ್ಮ ಶುನಕೋಕ್ಷಾಣಃ ಖರೇಭೊಷ್ಟ್ರಕಾಃ) ಎಂದು ಮುಹೂರ್ತಮಾರ್ತಂಡದಲ್ಲಿಯೂ, (ಸ್ವದಿಕ್ಷ್ವರ್ಥದಾಃ) ಎಂದು ಕಾಲಾಮೃತದಲ್ಲಿಯೂ, ಹೇಳಿರುವದರಿಂದಾ ಆಯಾಯಾ ದಿಕ್ಕಿನಲ್ಲಿ ಆಯಗಳೆಲ್ಲವೂ ಪ್ರಶಸ್ತಗಳೆಂದು ತಿಳಿಯತಕ್ಕದ್ದು, ಮತ್ತು ಜಾತಿಭೇದದಿಂದಲೂ ವಸ್ತುಭೇದದಿಂದಲೂ, ಧ್ವಜಾದ್ಯಾಯಗಳು ಶುಭಕರಗಳು, (ವಾಸ್ತುಪ್ರದೀಪದಲ್ಲಿ) ಶ್ಲೋ॥ ಖೇಟಖರ್ವಟಕೇಷು ವೃಷಸ್ಸಿಹ್ಮೋ ಗಜಶ್ಶುಭಃ। ವಾಪೀಕೂಪತಟಾಕಾದಾಗಜೋದೇಯೋವಿಚಕ್ಷಣೈಃ। ಆಸನೆಯೋಜಯೆತ್ಸಿಹ್ಮಂ ಶಯನೇಚೈವಕುಂಜರಂ । ವೃಷಂಭೋಜನಪಾತ್ರೇಚ ದದ್ಯಾತ್ಶಿಜ್ಞಾಲಾದಿಷುಧ್ವಜಂ । ಮಹಾನಸೇಗ್ನಿಶಾಲಾಯಾಂ ಗೃಹೆಚಾಗ್ನ್ಯುಪಜೀವಿನಾಂ । ಧೂಮಂದದ್ಯಾತ್ತಥಾಶ್ವಾನಂ ಯವನಾನಾಂ ತ್ಯಜಯೋರ್ಗೃಹೇ । ಖರಶ್ಶಯ್ಯಾಗೃಹೇಯೋಜ್ಯೋಧ್ವಾಂಕ್ಷಃಪಕ್ಷಿಪತೆರ್ಗೃಹೇ। ವೃಷ್ಟಿಸಿಂಹಗಭಂದದ್ಯಾತ್ತಾನಾದಿಪುರಮಂದಿರೇ (ಎಂಬದಾಗಿಯೂ) ಶಿಲ್ಪಿಶಾಸ್ತ್ರದಲ್ಲಿ ಶ್ಲೋ॥ ವಸ್ತ್ರಜೇಧರ್ಮಶಾಲಾಯಾಂಕುಂಭೆ ಸ್ತಂಭಧ್ವಜೇಧ್ವಜಃ ॥ ಗೌಗಜಾಭೂಗೃಹೇಚೈವಸಾಧಾರಣಗೃಹೇಶುಭಾ

ಯಂತ್ರೇಶಸ್ತೇ ರಥೇಸಿಹ್ಮೋಭಾಂಡಾಗಾರೆಶುಭೋಗಜಃ। ಧಾನಾ್ಯಂಬು ಸ್ಥಾನಗೋಶ್ವೇಭಶಾಲಾಯಾಂವೃಷಭಶ್ಶುಭಃ । ನಾಡ್ಯಭಾಗೋದ್ವಾಹ ವೇದಾ್ಯಂಗಜಸಿಂಹವೃಷಾಶ್ಶುಭಾಃ॥ ಎಂಬದಾಗಿಯೂ ಹೇಳಿರುವದ್ದರಿಂದ ಗ್ರಾಮ, ಊರು, ಕೋಶಗಳಲ್ಲಿ ವೃಷಭ, ಸಿಂಹ, ಗಜ, ಈ ೩ ಅಯಗೆಳು ಶುಭಕರಗಳು, ವಾಪೀ, ಕೂಪ, ತಟಾಕ (ಇವುಗಳ ಲಕ್ಷಣ ಜಲಾರ್ಗಳ ಶಾಸ್ತ್ರದಲ್ಲಿ) ಶ್ಲೋ॥ ದ್ವಾರಹೀನೋಭವೇತ್ಕೂಪೋದ್ವಾರಣೈಕೇನ ವಾಪಿಕಾ । ನೈಕದ್ವಾರಾಪುಷ್ಕರಿಣೀದೀರ್ಘಾಕಾರಾತುದೀರ್ಘಿಕಾ । ಕುಲ್ಯಾವಿಧೂತತೋಯಾಚತಟಾಕಾಃಪರಿಕೀರ್ತಿತಾಃ॥ ಅಂದರೆ,...ದ್ವಾರವಿಲ್ಲದೆ ಶೇದೋಭಾವಿಗೆ ಕೂಪವೆಂತಲೂ ಒಂದುಕಡೆ ದಾರಿ ಇರುವದು ವಾಪಿಯೆಂತಲೂ ನಾಲ್ಕು ಕಡೆಯೂ ದ್ವಾರವಿರುವದು ಪುಷ್ಕರಣಿಯೆಂತಲೂ ಉದ್ದಕ್ಕೂ ದೀರ್ಘವಾಗಿರುವದು. ದೀರ್ಘಿಕೆಯೆಂತಲೂ, ಕಾಲುವೆಗಳಿಂದ ನೀರು ಬಂದು ತುಂಬುವಂತಾದ್ದು ತಟಾಕವೆಂತಲೂ ತಿಳಿಯತಕ್ಕದ್ದು

ಇಂಥಾವುಗಳಲ್ಲಿ ಜಯವೂ, ಕೂತುಕೊಳ್ಳತಕ್ಕ ಮಣೆ, ಕುರ್ಚಿ, ಮೊದಲಾದವುಗಳಲ್ಲಿ ಸಿಹ್ಮಾಯವೂ; ಮಂಚ, ಹಾಸಿಗೆ ಮೊದಲಾದವುಗಳಲ್ಲಿ ಗಜಾಯವೂ, ಊಟಮಾಡುವ ಕಂಚು ಮೊದಲಾದ್ದರಲ್ಲಿ ವೃಷಭಾಯವೂ, ಶಾಲೆಗಳಲ್ಲಿ ಧ್ವಜಾಯವೂ, ಅಡಿಗೇಮನೆ ಅಗ್ನಿಕಾರ್ಯದ ಮನೆ, ಬೆಂಕಿಯಿಂದ ಜೀವಿಸತಕ್ಕವರ ಮನೆ ಇಂಥಾವುಗಳಲ್ಲಿ ಧೂಮಾಯವೂ, ಯವನರು ಅಂತ್ಯಜರು ಇವರ ಮನೆಗಳಲ್ಲಿ ಶುನಕಾಯವೂ, ಮಲಗುವ ಮನೆಯಲ್ಲಿ ಖರಾಯವೂ, ಹಕ್ಕಿಗಳ ಮನೆಯಲ್ಲಿಯೂ, ಪಟ್ಟಣ ಗೃಹದಲ್ಲಿ ಕಾಕಾಯವೂ, ಅರಸರ ದೇವತೆಗಳ ಮನೆಯಲ್ಲಿಯೂ, ಪಟ್ಟಣಗೃಹದಲ್ಲಿ ಧ್ವಜ, ವೃಷಭ, ಸಿಂಹ, ಗಜಾಯಗಳೂ, ಪಟಗೃಹ, (ಡೇರಾ, ಧರ್ಮಶಾಲೆ, ಕಲಶ, ಸ್ತಂಭ, ಪತಾಕ ಇವುಗಳಲ್ಲಿ ಧ್ವಜಾಯವೂ, ಸಾಧಾರಣ ಮನೆ ಪಾತಾಳಗೃಹ ಇವುಗಳಲ್ಲಿ ವೃಷಭ, ಸಿಂಹಾಯಗಳೂ, ಯಂತ್ರದಲ್ಲಿ, ರಥದಲ್ಲಿ, ಸಿಂಹಾಯವೂ, ಬೊಕ್ಕಸದ ಮನೆಯಲ್ಲಿ ಗಜಾಯವೂ, ಕಣಜ, ನೀರಿನಮನೆ, ಗೋಶಾಲೆ, ಅಶ್ವಶಾಲೆ, ಗಜಶಾಲೆ, ಇವುಗಳಲ್ಲಿ ವೃಷಭಾಯವೂ, ಮದುವೆ ಜಗುಲಿಯಲ್ಲಿ ಗಜ, ಸಿಂಹ, ವೃಷಭಾಯಗಳೂ, ವೈಶ್ಯಾಗೃಹದಲ್ಲಿ ಖರಾಯವೂ, ಪ್ರಶಸ್ತಗಳಾಗಿರುತ್ತವೆ ಮತ್ತು ಈ ಆಯಗಳನ್ನಿಡುವುದರಲ್ಲಿ ಸಂಖ್ಯೆಯು ವಿಷಮವಾಗಿದ್ದರೆ

ಶುಭಾಯುಗಳೂ, ಸಮವಾಗಿದ್ದರೆ ದೋಷಾಯುಗಳೂ ಬರುತ್ತೆಂದು ತಿಳಿಯತಕ್ಕದ್ದು

ಶ್ಲೋ॥ ಸಿಹ್ಮಾಗ್ರಮೂಲೇಗಜಮುಗ್ರಕೂಟಂಧ್ವಜಾಗ್ರಕೂಟಂವೃಗೆ ಮೂಲಶೋಭನಂ । ಗೆಜಸ್ಯಪೃಷ್ಠೇಹರಿಸೀರ್ಷಮುಕ್ತಂ ವೃಷೇಶಿರಸ್ಸಿಹ್ಮಪದಾತಿಕೂಟಂ ॥

ಟೀ॥ ಸಿಂಹಾಯುದ ಮೂಲದಲ್ಲಿ ಧ್ವಜಾಯುದ ತುದಿಯನ್ನು ಸಂಧಿಸಿದರೆ ಒಳ್ಳೇದು, ಗಜಾಯುಬ ತುದಿಯಾದರೂ ಸರಿಯೆ ? ಧ್ವಜಾಯುದ ತುದಿಯಲ್ಲಿಸಿಹ್ಮಾಯುದ ಮೊದಲು, ಕೂಡಿದರೂ ಮೇಲು ಗಜಾಯು ತದಿಯಲ್ಲಿ ಸಿಹ್ಮಾಯುದ ನೊದಲು ಕೂಡಿದರೂ, ವೃಷಭಾಯುದ ಮೊದಲಿನಲ್ಲಿ ಸಿಹ್ಮಾಯುದ ತುದಿಯು ಕೂಡಿದರೂ ಶುಭಕರವಾಗಿರುವುದು.

ಶ್ಲೋ ॥ ವೃಷೇಶ್ವಾನೇಸಮಾಸಂಧಿರ್ಗಜಧೂಮಾಯುತಶ್ಶುಭಃ । ಕರೀಸಿಹ್ಮೆಗುಣಾತೀತಂಧ್ವಜವಾಯುಸ ಉತ್ತಮಃ । ಅಗ್ನಿದೋಷಂ ಸಂಧಿದೋಷಂಸರ್ವದೋಷಂ ನಿವಾರಯೇತ್ ॥

ಟೀ॥ ವೃಷಭಾಯುಕ್ಕೂ, ಶ್ವಾನಾಯುಕ್ಕೂ, ಗಜಾಯುಕ್ಕೂ, ಧೂಮಾಯುಕ್ಕೂ, ಗಜಾಯುಕ್ಕೂ, ಧ್ವಜಾಯುಕ್ಕೂ, ವಾಯುಸಾಯುಕ್ಕ, ಸಂಧಿಸಿದರೆ ಸಂಧಿದೋಷ ಅಗ್ನಿದೋಷ ಮೊದಲಾದ ಯಲ್ಲಾ ದೋಷಗಳೂ, ಪರಿಹಾರವಾಗುವದು.

ಶ್ಲೋ॥ ಸಿಹ್ಮಪ್ರಷ್ಠಂವೃಷಮೂಲಂಧ್ವಜಮೂಲಂಗಜಾನನಂ । ಸಿಂಹಮೂಲಂ ವೃಷವೃಷ್ಠಂಸಂಧಿಂಕುರ್ಯಾಚ್ಛುಭಂಭವೇತ್ ॥

ಟೀ॥ ಸಿಹ್ಮಾಯುದ ತುದಿಯೂ, ವೃಷಾಯುದ ಮೂಲವೂ, ಧ್ವಜಾಯುದ ಮೂಲವೂ, ಗಜಾಯುದ ಮೂಲವೂ, ಸಿಹ್ಮಾಯುದ ಮೂಲವೂ, ವೃಷಭಾಯುದ ತುದಿಯೂ, ಸಂಧಿಮಾಡಿದ್ದಾದರೆ ಶುಭಕರವಾಗಿರುವದು.

ಶ್ಲೋ॥ ಶ್ವಾನಮೂಲೇಗಜಾಗ್ರಂಚಗಜಮೂಲೆಖರಾಗ್ರಕಂ । ಖರಾಗೇವೃಷಮೂಲಂಚವಾಯುಸಾಗ್ರಂಯಧಾಕ್ರಮಂ । ವಾಯುಸಾಗ್ರೇ ಧ್ವಜಮೂಲಂಸಂಧಿಂಕೃತ್ವಾಶುಭಂಭವೇತ್ ॥ ....

ಟೀ॥ ಶುನಕಾಯುದ ಮೂಲವಲ್ಲ ಗಜಾಯುದ ತುದಿಯೂ ಗಜಾಯುದ ಮೂಲದಲ್ಲಿ ಖರಯುದ ತುದಿಯೂ, ಖರಾಯುದ ತುದಿಯಲ್ಲಿ ವೃಷಾಯುದ ಮೊದಲೂ ವಾಯುನಾಯುದ ಕೊನೆಯೂ, ವಾಯುಸಾಯುದ ತುದಿಯಲ್ಲಿ ಧ್ವಜಾಯುದ ಮೊದಲು ಕೂಡಿಸಿದರೆ ಶುಭಕರವು.

ಶ್ಲೋ॥ ಏಕಸಂಧಿ-ದ್ವಿಸಂಧಿಸ್ಸ್ಯಾದಗ್ನಿಧ್ವಂಸಗುಣಸ್ತಥಾ। ತ್ರಿಸಂಧಿ ಶ್ಚ ಚತುಸ್ಸಂಧಿಃಕರ್ತೃರ್ರೋಗಂಕುಲಕ್ಷಯಂ । ಪಂಚಸಂಧಿಶ್ಚ ಷಟ್ಸಂಧಿಃಮೃತ್ಯುರ್ಭವತಿನಿಶ್ಚಯಃ । ಸಪ್ತಸಂಧ್ಯಷ್ಟಸಂಧೀಶ್ಚ ಪುತ್ರನಾಶಸ್ತುಜಾಯತೇ । ಇದಂಸ್ಯಾತ್ತ್ವಪಸವ್ಯಂತು ತತ್ಫಲಂಗೃಹಕರ್ಮಣಿ । ಸವ್ಯಾಕಾರಂಗೃಹೇಸ್ಯಾಸ್ಯಂತತ್ತತ್ಸಂಧಿಫಲಂಭವೇತ್ । ಆಯುರಾರೋಗ್ಯೈಶ್ವರ್ಯಂಸರ್ವೇಗ್ರಹಫಲಾಧಿಕಂ ॥

ಟೀ॥ ಮೊದಲು ಹೇಳಿದ ಪ್ರಕಾರ ಸಂಧಿ ಕೂಡಿಸದೆ ಅಪಸವ್ಯವಾಗಿ ಕೂಡಿಸಿದ ಸಂಧಿಗಳಿಗೆ ಕ್ರಮವಾಗಿ ಫಲಗಳು ಹೇಳುತ್ತಾನೆ. ೧—೨ ಸಂಧಿಗಳು, ಅಗ್ನಿದಾಹವನ್ನು ೩—೪ ಸಂಧಿಗಳು ಮರಣವನ್ನು, ೭—೮ ಸಂಧಿಗಳು ಪುತ್ರನಾಶವನ್ನು ಉಂಟುಮಾಡುವದು. ಪ್ರದಕ್ಷಿಣವಾಗಿ ಗ್ರಹಗಳನ್ನು ಕಟ್ಟಿದರೆ ಆಯುಸ್ಸೂ, ಆರೋಗ್ಯವೂ, ಸಂಪತ್ತೂ ಸಹ ಉಂಟಾಗುವದು.

## ಪರಿಸ್ತರಣ ನಿರ್ಣಯ.

ಶ್ಲೋ ॥ ಸಿಹ್ಮಶೀರ್ಷೇಬಹಿರ್ಭಾಗೇಧ್ವಜಸ್ಸರ್ವಶುಭಾವಹಃ । ಧ್ವಜಾಸ್ಯೇಪೃಷ್ಠಭಾಗೇಚವೃಷಶ್ಶೋಭನಮುತ್ತಮಂ । ವೃಷಾದ್ಬಹಿರ್ಗಜಸ್ಸಿಹ್ಮಮುಖೇದಕ್ಷಿಣತಃಶುಭಂ । ಗಜಶೀರ್ಷೇಚಸಿಹ್ಮಾಯಂ ಪರಿಸ್ತೀರ್ಯಾದ್ಗೃಹೋತ್ತಮಂ ॥

ಟೀ॥ ಸಿಹ್ಮಾಯಕ್ಕೆ ಮುಖದಲ್ಲಿಯೂ, ಹಿಂಭಾಗದಲ್ಲಿಯೂ ಧ್ವಜಾಯವಿದ್ದರೆ ಶುಭವು, ಧ್ವಜಾಯದ ಇದಿರಾಗಿಯೂ ಹಿಂಭಾಗದಲ್ಲಿಯೂ ವೃಷಭಾಯವು ಶ್ರೇಷ್ಠವು ವೃಷಭಾಯದ ಹಿಂಭಾಗದಲ್ಲಿಯೂ ಸಿಹ್ಮಾಯದ ಎದುರಾಗಿಯೂ ಬಲಗಡೆಯೂ, ಗಜಾಯವು ಶುಭಕರ, ಗಜಾಯದ ಇದಿರಾಗಿ ಸಿಂಹಾಯವೂ ಶ್ರೇಷ್ಠವು.

ಶ್ಲೋ ॥ ಸಿಹ್ಮಾನನೇಗಜಕ್ಷೋಭಃ ಗಜಪೃಷ್ಟಾದ್ವೃಷಸ್ತಥಾ । ವೃಷಶೀರ್ಷೇಸಿಹ್ಮರೋಗಃ ಸಿಹ್ಮವಾಮೇಧ್ವಜೇಹತಿಃ । ಇತಿಪರ್ಯಾಯ ದೋಷಶ್ಚಗಾಗೇಯಮಚನಂತಥಾ ॥

ಟೀ॥ ಸಿಹ್ಮಾಯದ ಮುಖದಲ್ಲಿ ಗಜಾಯವಿದ್ದರೆ ಕ್ಷೋಭ ಉಂಟಾಗುವದು. ಗಜಾಯದ ಹಿಂಭಾಗದಲ್ಲಿ ವೃಷಾಯವಿದ್ದರೆ ನಾಶವಾಗುವದು,

ವೃಷಾಯುವ ಶಿರಸ್ಸಿನಲ್ಲಿ ಸಿಂಹಾಯುವಿದ್ದರೆ ನಾಶವುಂಟಾಗುವದು, ಸಿಹ್ಮಾಯುದ ಯೆಡವಕ್ಕದಲ್ಲಿ ಧ್ವಜವಿದ್ದರೆ ಮರಣವುಂಟಾಗುವದು, ಹೀಗೆಂದು ಗಾರ್ಗೇಯರುಷಿಯು ಮತವು.

ಶ್ಲೋ॥ ಭಾಗೇಭಾಗೇಚದೋಷಸ್ಸ್ಯಾನ್ನ ಕುರ್ಯಾದ್ಗೇಹಸಂಗ್ರಹಂ। ಭಾಗದೋಷಂವಿನಾಗೇಹೇಸಮುಸ್ಸಾಭಾಗ್ಯವರ್ಧನಃ । ದೋಷವರ್ಜಿತಗೇಹೇಚಸಂಧಿಂಕುರ್ಯಾತ್ಪ್ರಶಸ್ತಕಂ । ದೋಷಭಾಗಂಶುಭಂ ಭಾಗಂಸಂಧಿದೋಷಂನಕಾರಯೇತ್ ॥

ಟೀ॥ ಶುಭಭಾಗವೂ, ದೋಷಭಾಗವೂ, ಸಂಧಿಮಾಡಬಾರದು, ಶುಭಭಾಗಗಳೆರಡೂ ಸಂಧಿಸಿದರೆ ಉತ್ತಮ. ದೋಷವಿಲ್ಲದ ಮನೆಗಳೆರಡೂ ಸಂಧಿಸಿದರೆ ಶುಭಕರವು ದೋಷವಿರುವ ಮನೆಯೂ ದೋಷವಿಲ್ಲದಮನೆಯೂ ಸಂಧಿ ಮಾಡಬಾರದು.

### ಗಾರ್ಗೇಯ ನಿವೇಶನ ಲಕ್ಷಣ.

ಶ್ಲೋ॥ ಚತುರಶ್ರಂಸಮಂವಾಸ್ತುಚೋತ್ತರೇವಾಯತಂಭವೇತ್। ಕ್ಷತ್ರಿಯಾಣಾಂಪಿಶೇಷೇಣಪೂರ್ವಾಯತಮಥಾಪಿವಾ ॥

ಟೀ॥ ಮನೆಯ ನಿವೇಶನವು ಚಚ್ಚೌಕವಾಗಲೀ ಅಥವಾ ಉತ್ತರಕಡೆ ದೀರ್ಘವಾಗಲೀ, ಪೂರ್ವಕಡೆ ದೀರ್ಘವಾಗಲೀ, ಕ್ಷತ್ರಿಯರಿಗೆ ಯೋಗ್ಯವಾಗಿ ಈ ಪ್ರಮಾಣವಾಗಿ ಅಂಗವಿರಬೇಕೆಂದು ಕೆಲವರು ಹೇಳುವರು.

ಶ್ಲೋ॥ ಚತುರಶ್ರಸಮಂವಾಸ್ತುಬ್ರಾಹ್ಮಣಾನಾಂವಿಶೇಷತಃ । ಕ್ಷತ್ರಿಯಾಣಾಂಸಾಷ್ಟಂತಂವೈಶ್ಯಾಪಂಚಚತುಷ್ಟಯಂ। ತತಶ್ಶೂದ್ರೇಚವಿಜ್ಞೇಯಂಕಾರ್ಯಮುಷ್ಟಾಚತಸ್ತ್ರೀಚ॥ ಗೃಹಕ್ಷೇತ್ರಪ್ರಮಾಣಂತು ಗಾರ್ಗೇಯವಚನಂತಥಾ ॥

ಟೀ॥ ಬ್ರಾಹ್ಮಣರಿಗೆ ನಿವೇಶನವು ಚೌಕವಾಗಿರುವದು ಮೇಲು, ಕ್ಷತ್ರಿಯರಿಗೆ ಉದ್ದಳತೆ ೯ ಭಾಗ, ಅಗಲ ೮ ಭಾಗ, ವೈಶ್ಯರಿಗೆ ಉದ್ದಳತೆ ೫ ಪಾಲು, ಅಗಲ ೪ ಪಾಲು, ಶೂದ್ರರಿಗೆ ಉದ್ದಳತೆ ೮ ಪಾಲು, ಅಗಲ ೭ ಪಾಲು, ಈ ಪ್ರಕಾರ ಮಾಡಬೇಕಾದ್ದಲ್ಲದೆ ನಿವೇಶನದ ಆಯದ ವಿಸ್ತಾರಗಳನ್ನ ೬ ಭಾಗಮಾಡಿ ೧ ನೇದಾದ ಪಿಶಾಚ ಭಾಗದಲ್ಲಿ ಹಿತ್ತಲು ಮಾಡತಕ್ಕದ್ದು, ೨ನೇದಾದ ಮನುಷ್ಯಭಾಗದಲ್ಲಿ ಮನೆಯನ್ನು ಕಟ್ಟಬೇಕು ೩ನೇ ಭಾಗ ದೇವಭಾಗ ಇದರಲ್ಲಿ ಚಪ್ಪರವನ್ನು ಹಾಕಬೇಕು. ಉಳಿದ ಮೂ

ರು ಭಾಗಗಳನ್ನು ಅಂಗಳ ಮಾಡುವದು, ಈ ಪ್ರಕಾರ ಕಟ್ಟಿದ ಮನೆಯು ಶುಭಕರವೆಂದು ಗಾರ್ಗೀಯ ರುಷಿಯ ಮತವು.

---

### ಶೌನಕನಿವೇಶನದ ಲಕ್ಷಣ.

ಶ್ಲೋ || ನಿವೇಶನಂರಂಧ್ರಮಿತಂ ಚತುರ್ದ್ಯಾನ್ಸ್ಮಖಂಚತುರ್ದಿಕ್ಷ್ವಪಿ
ಶಾಚಭಾಗಂ|ದ್ವಿಭಾಗಮಾತ್ರಾಮಲಸಂಗಧಾತ್ರೀ ಗೃಹಂತೃತೀಯಂ
ಶ್ಶುಭದಂವದಂತಿ | ವೇದೇಷುಭಾಗಾಃಕಿಲದೇವಯೋಗ್ಯಾಃಪರಿಸ್ತ
ರೇಚೋತ್ತಮಭಾಗಸಂಖ್ಯಾ ||

ಟೀ|| ಗೃಹನಿವೇಶನವನ್ನು ೯ ಪಾಲುಮಾಡಿ ಪಿಶಾಚಭಾಗವಾದ ೧ ಪಾಲನ್ನು ಮನೆಯ ಸುತ್ತು ಬರುವಂತೆ ಬಿಟ್ಟು ೨ನೇ ಭಾಗದಲ್ಲಿ ಹಿತ್ತಲು ಮಾಡಿ ೩ನೇ ಭಾಗದಲ್ಲಿ ಮನೆಯನ್ನು ಕಟ್ಟಬೇಕು, ಮಿಕ್ಕ ೪—೫ನೇ ಭಾಗಗಳಲ್ಲಿ ಚಪ್ಪರವನ್ನು ಹಾಕಬೇಕು. ಇದು ಶೌನಕ ನಿವೇಶನದ ಲಕ್ಷಣವು.

---

### ಮನೆಗಳನ್ನು ಕಟ್ಟುವುದಕ್ಕೆ ಯೋಗ್ಯಸ್ಥಳ. ಅಯೋಗ್ಯವಾದ ಸ್ಥಳ

ಶ್ಲೋ||ಕ್ಷೀರದ್ರುಮೇವಿಹಾರೇಚದೇವಾಗಾರೇತಥೈವಚ | ಛಾಯಾ
ಯಾಂ ಗೃಹನಿರ್ಮಾಣಂವರ್ಜನೀಯಂ ಪ್ರಯತ್ನತಃ || ಊಷರೇ
ಬಲಸಂಸ್ಥಾನೇ ಕೋಣದೇಶ ಸ್ಮಶಾನಕೆ | ಪುರದ್ವಾರೇಚಸಾಲೇ
ಚ ವಲ್ಮೀಕೇಗ್ರಾಮಮಧ್ಯಮೇ | ಸಿಕತಾಯಾಂಸ್ವಿನ್ನಭೂಮೌನಿಂದಿ
ತಾಯಾಂತಥೈವಚ | ಏತೇಷುಕ್ಷೇತ್ರದೇಶೇಷು ನಕುರ್ಯಾದ್ವೇಶ್ಮ
ಕಂಬುಧೈಃ ||

ಟೀ|| ಹಾಲುಳ್ಳಮರ ಬೌದ್ಧಾಲಯ, ದೇವಸ್ಥಾನ, ಇವುಗಳ ನೆರಳಿನಲ್ಲಿಯೂ, ಚೌಳುಭೂಮಿ, ಬಲವಿಲ್ಲದಭೂಮಿ, ಗೊಂದಿ, ಸ್ಮಶಾನ, ಊರುಬಾಗಲು, ಕೋಟೆಯ ಸಮೀಪ ಭೂಮಿ, ಹುತ್ತಗಳುಳ್ಳ ಭೂಮಿ ಗ್ರಾಮಮಧ್ಯ, ಯಾವಾಗ್ಯೂ ತ್ಯಾಪವಾಗಿರುವ ಭೂಮಿ, ಕೆಟ್ಟುಹೋದನೆಲ, ಈಸ್ಥಳಗಳಲ್ಲಿ ಮನೆಯನ್ನು ಕಟ್ಟಬಾರದು.

## ನೀರುವಾಟಿ.

ಶ್ಲೋ॥ ಪೂರ್ವಪ್ಲವೋವ್ಯಾಧಿಹರೋ ನರಾಣಾಂ ತಥೋತ್ತರೇಚ್ಛೈ ವಧನಂಡದಾತಿ । ಧನಕ್ಷಯಂಪಶ್ಚಿಮತಃ ಪ್ರವಾಹೋಮೃತ್ಯು ರ್ಭವೇದ್ದಕ್ಷಿಣತಃಪ್ರವಾಹಾತ್ ॥

ಟೀ॥ ಮನೆಯ ನೀರು ಪೂರ್ವ ದಿಕ್ಕಿಗೆ ಹರಿದರೆ ಆರೋಗ್ಯವಾಗಿರುವದು ಉತ್ತರಕಡೆ ಹರಿದರೆ ಸಂಪತ್ತುಂಟಾಗುವದು, ಪಡಪಲು ಕಡೆ ಹರಿದರೆ ದಾರಿದ್ರ್ಯವುಂಟಾಗುವದು, ದಕ್ಷಿಣದಿಕ್ಕಿಗೆ ಹರಿದರೆ ಮೃತ್ಯುವುಂಟಾ ಗುವದು.

## ಮನೆಗೆ ಔನ್ನತ್ಯ

ಶ್ಲೋ॥ ಬ್ರಹ್ಮಕ್ಷತ್ರಿಯಯೋರ್ಭಿತ್ತಿರುಚ್ಛ್ರಯೋದಶಸಮ್ಮತಾಃ ವಿಟ್ಛೂದ್ರಯೋರ್ನವ ಜ್ಞೇಯಂಪ್ರಸೃತೇಃ ಪ್ರಾಕೃತೇಷ್ವಪಿ ॥

ಟೀ। ಮನೆಯ ಔನ್ನತ್ಯವು ಬ್ರಾಹ್ಮಣರಿಗೂ ಕ್ಷತ್ರಿಯರಿಗೂ ೧೦ ಗೇಣುದ್ದ, ವೈಶ್ಯರಿಗೂ ಶೂದ್ರರಿಗೂ ಮತ್ತು ಕೀಳುಜಾತಿಯವರಿಗೂ ೯ ಗೇಣು ಉದ್ದವು ಹಾಕಬೇಕು, ಈ ವಿಷಯದಲ್ಲಿ ರತ್ನಕೋಶದಲ್ಲಿ, ಶ್ಲೋ॥ ವಿಸ್ತಾರಷೋಡಶಾಂಶ ಚತುರ್ಹಸ್ತೋಭವೇದ್ಗೃಹೋಚ್ಛ್ರಾಯಃ ॥ ಎಂದು ಹೇಳಿರುವದ್ದರಿಂದ ಮನೆಯ ವಿಸ್ತಾರದಲ್ಲಿ ೧೬ ರಲ್ಲಿ ಒಂದುಭಾಗ ದೊಡನೆ ಕೂಡಿದ ನಾಲ್ಕು ಹಸ್ತಪ್ರಮಾಣವಿರಬೇಕೆಂದು ತಾತ್ಪರ್ಯವು,

ಮತ್ತು ಲಲ್ಲನು ॥ ಶ್ಲೋ॥ ನಾತ್ಯುಛ್ರಿತಂನಾತಿನೀಚಂ ಕುಡ್ಯೋ ತ್ಸೇದಂ ಯಥಾರುಚಿ ॥ ಯೆಂದು ಹೇಳಿರುವದರಿಂದ ಮನೆಯ ಅಂದಕ್ಕೆ ತಕ್ಕಹಾಗೆ ಗೋಡೆಯನ್ನು ಹಾಕಬೇಕೆಂತಲೂ, ಬಹಳ ಉದ್ದವೇ ಆಗಲಿ ಬಹಳಕುರುಚಾಗಾಗಲಿ ಹಾಕಕೂಡದೆಂತಲೂ ತಾತ್ಪರ್ಯವು.

## ತೃಣಗೃಹಗಳ ಲಕ್ಷಣ

ಶ್ಲೋ॥ ಆಯವ್ಯಯೌಮಾಸಶುದ್ಧಿಂಚಿಂತಯೇನ್ನ ತೃಣಾಲಯೇ ॥

ಟೀ॥ ಹುಲ್ಲುಮನೆಗಳನ್ನು ಕಟ್ಟುವದರಲ್ಲಿ ಆಯವ್ಯಯಾದಿ ಲಕ್ಷಣಗಳನ್ನು ಮಾಸಶುದ್ಧಿಯನ್ನು ನೋಡಲವಶ್ಯಕವಿಲ್ಲ. ಮತ್ತು (ವಿಶೇತ್ ಪ್ರಾಯುನೇಹರ್ಮ್ಯಂತೃಣಾಗಾರಂತುಸರ್ವದಾ) ಎಂದು ಹೇಳಿರುವದ್ದರಿಂದ ಗೃಹಪ್ರವೇಶಕ್ಕೂ ನಹ ಮಾಸಶುದ್ಧಿ ಅವಶ್ಯಕವಿಲ್ಲ. ಮತ್ತು ದೈವಜ್ಞ ವಲ್ಲಭದಲ್ಲಿ;—

ಶ್ಲೋ॥ ಅಳಿಂದ ನಿರ್ಯ್ಯೂಹವಿನಿರ್ಗಮಾದ್ಯಾಶ್ಚತುರ್ದಿಶಂಯೇಗೃಹ ಭೂಷಣಾಯ । ಆಯಾದಿಕಂತೇಷು ನಚಿಂತನೀಯಂಯತೋನತೇ ವಾಸ್ತು ಪರಿಗ್ರಹೇಸ್ಯುಃ ॥

ತಾ॥ ಪ್ರಧಾನ ಗೃಹಕ್ಕೆ ಅಲಂಕಾರವಾಗಿ ಕಟ್ಟಲ್ಪಡುವ ಪಡಶಾಲೆ ನಿರ್ಯ್ಯೂಪನಿರ್ಗಮ ಮೊದಲಾದವುಗಳು ವಾಸ್ತು ಪರಿಗ್ರಹಕ್ಕೆ ಯೋಗ್ಯವಾದವುಗಳಲ್ಲವಾದುದರಿಂದ ಇವುಗಳಲ್ಲಿ ಆಯಾದಿಗಳು ನೋಡ ಕೆಲಸವಿಲ್ಲ. ಮತ್ತು ವಸಿಷ್ಠರು,—

ಶ್ಲೋ॥ ಏಕಾದಶಯವಾದೂರ್ಧ್ವಂಯಾವದ್ದ್ವಾತ್ರಿಂಶಹಸ್ತಕಂ । ತಾವದಾಯಾದಿಕಂಚಿಂತ್ಯಂತದೂರ್ಧ್ವಂ ನೈವಚಿಂತಯೇತ್ ॥

ಅಂದರೆ, ೧೧ ಯವೆಗಳ ಪ್ರಮಾಣ ಮೊದಲುಗೊಂಡು ೩೨ ಹಸ್ತಗಳ ವರಿವಿಗೂ ಇರುವ ವರಿವಿಗೂ ಇರುವ ಮನೆಗಳಿಗೇನೆ ಆಯಾದಿಗಳು ನೋಡತಕ್ಕದ್ದು, ಅಪರ ಮೇಲೆ ಅವಶ್ಯಕವಿಲ್ಲವೆಂದು ತಾತ್ಪರ್ಯ ಮತ್ತು ವಾಸ್ತು ಚಿಂತಾಮಣಿಯಲ್ಲಿ,....

ಶ್ಲೋ॥ ಯತ್ರದ್ವೈಷ್ಟಗ್ರಂ ಗೃಹಾದೀನಾಂ ದ್ವಾತ್ರಿಂಶಾರ್ಧಂ ತತೋಧಿಕಂ । ನತತ್ರಚಿಂತಯೇದ್ಧೀಮಾನ್‌ಗಣನಾಯವ್ಯಯಾದಿಕಂ ॥

ತಾ॥ ಮನೆ ಮೊದಲಾದವುಗಳ ಉದ್ದವು ೧೬ ಹಸ್ತಗಳಿಗೆ ಅತಿಕ್ರಮಿಸಿಯೂ ಇದ್ದರೆ ಅಂಥಾವುಗಳಿಗೆ ಆಯಾದಿಗಳು ನೋಡಕೆಲಸವಿಲ್ಲವೆಂದು ಹೇಳಿರುವದರಿಂದಾ ಮೇಲೆ ವಸಿಷ್ಠರು ಹೇಳಿರುವ ರೀತ್ಯಾ ಏಕಾದಶ ಯವೆಗಳು ಮಣಿಮೊದಲಾದವುಗಳಲ್ಲಿಯೂ ೧೬ ಹಸ್ತಗಳು ಮನೆ ಮೊದಲಾದ್ದಕ್ಕೂ ತಿಳಿಯತಕ್ಕದ್ದು. ಮತ್ತು ಮುಹೂರ್ತಮಾರ್ತಾಂಡದಲ್ಲಿ,--

ಶ್ಲೋ॥ದ್ವಾತ್ರಿಂಶಾಂಧಿಕಹಸ್ತಮುಬ್ಧವದನಂತಾರ್ಣಂತ್ವಳಿಂದಾದಿಕಂ। ನೈಷ್ಟಾಯಾದಿಕಮೀರಿತಂ ತೃಣಗೃಹಂ ಸರ್ವ್ವಾಸುಮಾಸ್ವೂದಿತಂ ॥

ಯೆಂದಿರುವದ್ದರಿಂದಾ ನಾಲ್ಕು ಕಡೆ ಬಾಗಲುಳ್ಳ ಮನೆಗೂ ಆಯಾದಿಗಳು ನೋಡಕೆಲಸವಿಲ್ಲ.

## ಮರಗಳನ್ನು ಕಡಿಯುವದಕ್ಕೆ ನಕ್ಷತ್ರಗಳು.

ಶ್ಲೋ॥ ಕೃಶಾನುನಕ್ಷತ್ರಗತೇಚ ಭಾನೌಋಕ್ಷೆವಿಧೌ ವೈಷ್ಣವಕುಂಭ ರಾಶೌ । ನದಾರುವಚ್ಛೇದನ ಸಂಗ್ರಹಾದಿ ಕುರ್ವೀತವೇಶ್ಮೇರಿತಕರ್ಮ ಸಿದ್ಧಿಃ ॥

ಟೀ॥ ಸೂರ್ಯನು ಕೃತ್ತಿಕಾ ನಕ್ಷತ್ರದಲ್ಲಿರುವಾಗಲೂ ಅಮಾವಾಸ್ಯೆ ಮೊದಲು ಹುಣ್ಣಿಮೆ ವರಿವಿಗೂ, ಚಂದ್ರನು ನಿತ್ಯನಕ್ಷತ್ರದಲ್ಲಿ ಶ್ರವಣದಲ್ಲಿದ್ದರೂ ಹಾಗೂ ಕುಂಭರಾಶಿಯಲ್ಲಿದ್ದರೂ ಮನೆಗೆಳಿಗಾಗಿ ಮರಗಳನ್ನು ಕಡಿಯಬಾರದು. ಮತ್ತು ಸಂಗ್ರಹಿಸಬಾರದು, ಹಾಗೆ ಮಾಡಿದ್ದಾದರೆ ಅದರಿಂದಾ ಫಲವುಂಟಾಗುವದಿಲ್ಲ.

ಶ್ಲೋ॥ ಕೃಷ್ಣಪಕ್ಷೇಪಿತಿಥಿಷುಮೀಕಾರಾಂತಾಸುಪಂಚಸು। ರೋಹಿಣಿ ಸಹಿತೆಘಸ್ರೆಬಬರ್ುರೋಪಿನಚಾತುರಃ ॥

ಟೀ॥ ಕೃಷ್ಣಪಕ್ಷದಲ್ಲಿ ನಿಷಿದ್ಧವಾದರೂ ಮೀ ಯೆಂಬ ಅಕ್ಷರವೇ ಅಂತ್ಯವಾಗಿ ವುಳ್ಳ ಪಾಡ್ಯಮಿ, ಪಂಚಮಿ, ಸಪ್ತಮಿ, ಅಷ್ಟಮಿ,ನವಮಿ (ದಶಮಿ) ಈ ದಿವಸಗಳಲ್ಲಿ ರೋಹಿಣೀ, ನಕ್ಷತ್ರವು ಕೂಡಿದ್ದರೆ ಮರಗಳೆನ್ನು ಕಡಿಯಬಹುದು, ಜಾಲಿಗಿಡವಾದರೂ, ಹುಳುಹಿಡಿಯುವದಿಲ್ಲ.

---

## ಅಯೋಗ್ಯಗಳಾದ ಮರಗಳು,

ಶ್ಲೋ॥ ಪ್ಲಕ್ಷೋದುಂಬರಚೂತಾಖ್ಯಾನಿಂಬಸ್ನುಹಿವಿಭೀತಕಾಃ । ದಗ್ಧಾಃಕಂಟಕಿನೋವೃಕ್ಷಾ ವಟಾಶ್ವತ್ಥಕ ಪಿತ್ಥಕಾಃ । ಅಗಸ್ತಿಶಿಗ್ರು ಪಾಲಾಶಃ ತಿಂತ್ರಿಡೀಕಾಶ್ಚನಿಂದಿತಾಃ । ಕರಂಜ್ಯೈರುಂಡನಿರ್ಗುಂಡೀ ಗೃಹಶಲ್ಯಾಶ್ಚನಿಂದಿತಾಃ । ಅನ್ಯೇಚಗೃಹನಿರ್ಮಾಣೇಯೋಜನೀಯ್ಯಾಸ್ಸದಾದ್ರುಮಃ ॥

ಟೀ॥ ಬಸುರಿ, ಅತ್ತಿ, ಮಾವು, ಬೆಲ್ಲವು, ಕಳ್ಳಿ, ತಾರೆ, ಈ ವೃಕ್ಷಗಳು ಸುಡಲ್ಪಟ್ಟಂಥಾವು, ಮುಳ್ಳುಳ್ಳದ್ದು ಆಲ, ಅಶ್ವತ್ಥ, ಬೇಲ, ಅಗೆಸಿ, ನುಗ್ಗೆ, ಮುತುಕ, ಹುಣಿಸೆ, ಹೊಂಗೆ, ಹರಳು, ಲಕ್ಕಿ ಈ ಮರಗಳು ಗೃಹಶಲ್ಯಗಳು ಅಂದರೆ,....ಇತರ ಮನೆಗೆಳಿಗೆ ಹಾಕಿದ್ದವು ಇವುಗಳನ್ನು ಮನೆಗೆ ಉಪಯೋಗಿಸಬಾರದು.

ಶ್ಲೋ॥ ಕೋಟರಂಚಾಗ್ನಿದಗ್ಧಂಚ ಅರ್ಧಶುಷ್ಕಂ ಮ್ರುತಕರಂಅನ್ಯೈಃ

ಸ್ಫುಟಿತವೃಕ್ಷಂಚಅರ್ಧಖಂಡ ಸ್ತುಯೋಭವೇತ್‌ದೇವಾಗಾರೆತಟಾಕೇಚಸ್ಮಶಾನೇಕೂಪಸಂಸ್ಥಿತೇ | ಫಲಿತಂಕ್ಷೀರವೃಕ್ಷಂಚತಿಂತ್ರಿಡೀಕಂತಥೈವಚ | ಖರ್ಜೂರಂಚಾಮ್ರನಿಂಬೋಶ್ವಂಪಾಲಾಶಂಮಧುಕಂತಥಾ | ಮದುಸ್ಥಿತಂ ಭೂತವಾಸಂ ತಥಾವಲ್ಲೀವೃತಂಚಯತ್ |
ಗಜಬಂಧನವೃಕ್ಷಂಚಾಲಾಯೋತ್ತಂಚ ಜನಾಶ್ರಯಂ | ತಾಪಸಾಶ್ರಯವೃಕ್ಷಂಚ ನದೀತೀರೆಸ್ಥಿತಂ ತಥಾ| ಕಂಟಕಂಟಬ್ರತಾಕಾಂತಂ ತಥಾಚಾಜ್ಞಾತ ನಾಮಕಂ ಮಾಯುನಾಸ್ವೇನಪತಿತಂ ಪಥಿತಾಶ್ರಯ ಮೆವಚ ಅದ್ಯಶುಷ್ಕಂಚೈವಮಾದೀನ್‌ವರ್ಜಯೇದ್ಗೃಹಕರ್ಮಣಿ ||

ಟೀ|| ತೊರ್ರೆಗಳುಳ್ಳದ್ದು ಸುಟ್ಟದ್ದು ಅರ್ಧವೊಣಗಿರುವದು ಹೆಣಕ್ಕಾಗಿ ಹೊಡೆದಿರುವದು, ಇತರರಿಂದಾ ಕಡಿಯಲ್ಪಟ್ಟದ್ದು, ಅರ್ಧಕತ್ತರಿಸಲ್ಪಟ್ಟದ್ದು ದೇವಸ್ಥಾನ ಕೆರೆ ಸ್ಮಶಾನ ಭಾವಿ ಸಮೀಪ ಇವುಗಳಲ್ಲಿದ್ದದ್ದು ಫಲ ಬಿಟ್ಟಿರುವದು ಹಾಲುಳ್ಳದ್ದು ಹುಣಿಸೆ ಖರ್ಜೂರ ಮಾವು ಬೇವು ಅತ್ತಿ, ಮುತ್ತುಕ ಹಿಪ್ಪೆ ಜೇನಿಟ್ಟರುವದು ಗ್ರಹಗರ್ತವು ಬಳ್ಳಿಗಳಿಂದಾ ಸುತ್ತಲ್ಪಟ್ಟದ್ದು, ಆನೆಯನ್ನ ಕಟ್ಟದ್ದದ್ದು ಬಹುಜನರಿಗೆ ಆಶ್ರಯವಾದದ್ದು, ನದಿಯ ಗಡ್ಡೇಲಿರುವದು ಬದನಿಕೆಯಿಂದಾ ಕೂಡಿದ್ದು ಹೆಸರಿಲ್ಲದ್ದು ಗಾಡಿಯಿಂದಾ ಬಿದ್ದದ್ದು, ಮಾರ್ಗಸ್ಥರಿಗೆ ಉಪಯೋಗವಾದದ್ದು, ಮೂಲವಣಗಿದ್ದು ಈ ಮೊದಲಾದವುಗಳನ್ನು ಮನೆಗೆ ಉಪಯೋಗಿಸಬಾರದು ಮತ್ತು ವರಾಹನು

ಶ್ಲೋ || ಪಿತೃವನಮಾರ್ಗಸುರಾಲಯವಲ್ಮೀಕೋದ್ಯಾನತಾಪಸಾಶ್ರಮಜಾಃ | ಚೈತಸರಿತ್ಸಂಗಮಭವಾಶ್ಚಘಟತೋಯಸ್ಸಿಕ್ತಾಶ್ಚ |ಕಂಜಾನುಜಾತವಲ್ಲೀನಿಪೀಡಿತಾವಜ್ರಮಾರುತೋಪಹತಾಃ| ಸ್ವಪತಿತಹಸ್ತಿನಿಪೀಡಿತಶುಷ್ಕಾಗ್ನಿಪ್ಲುಷ್ಟದುಷ್ಟಮಧುನಿಯಾಃ| ತರವೋವರ್ಜೆಯಿತವ್ಯಾಶ್ಶುಭದಾಸ್ಯುಗೆಸ್ಸಿಗೆ ಪತ್ರಕುಸುಮಫಲಾಃ | ಯೆಂದು ಹೇಳಿರುವದ್ದರಿಂದಾ ಉದ್ಯಾನವನದಲಿ ಹುಟ್ಟಿದಂಥಾದ್ದು ಹುತ್ತಿನಲ್ಲಿ ಬೆಳದದ್ದು ನದಿಯ ಸಂಗಮದಲ್ಲಿ ಹುಟ್ಟಿದ್ದು ನೀರಿನಲ್ಲಿ ಹುಟ್ಟಿದ್ದು ಮಡಿಕೆಗಳಿಂದಾ ನೀರುಹಾಕಿ ಬೆಳಸಿದ್ದು ನೀರಿನಲ್ಲಿ ಹುಟ್ಟಿದ್ದು ಸಿಡ್ಲುಬಿದ್ದು ಮುರಿದದ್ದು ಆನೆಯಿಂದಾ, ಪೀಡಿಸಲ್ಪಟ್ಟದ್ದು, ಈ ಮೊದಲಾದವೂ ಕೂಡ ಅಯೋಗ್ಯವಾದವುಗಳೆಂದು ತಿಳಿಯಬೇಕು.



## ಯೋಗ್ಯವಾದ ವೃಕ್ಷಗಳು.

ಶ್ಲೋ॥ ಶ್ರೀಪರ್ಣಿಶಾಕರೋಹಿಣೀಶಾಕಸರ್ಜಾಶ್ಚಸರಲಾಶ್ಚಸರಲಾ ಶುಭಾಃ । ಪಥಂಗಲೋಧ್ರಶಾಲಾಶ್ಚ ಸಾಲಾರ್ಜುನಕಶಿಂಶುಪಾಃ । ಚಂದನಾಶೋಕಬದರೀ ಮಧೂಕಾಶ್ಚ ಕದಂಬಕಾಃ । ಪ್ರಶಸ್ತಾಶ್ಚ ಶಮೀನಿಂಬ ಬಿಲ್ವವರ್ಜಂ ಗೃಹಾಂತಿಕೇ । ಗೃಹೇಕಾಷ್ಟಂಸಮಂ ಸಮಂಶ್ರೇಷ್ಠಮಳಿಂದೇವಿಷಮಂಶುಭಂ ॥

ಟೀ॥ ಕಿರಿಯಶಿವನೀ, ಅಳಲೆತ್ಯಾಗ ಹೊನ್ನೆ. ದೇವದಾರು ಪತಂಗ ಲೊಧ್ರ ಶಾಲಾವೃಕ್ಷ ಬೀಳೀಮತ್ತಿ ಕೆಂಪಮತ್ತಿ, ಶಿಂಶುಪಶ್ರೀಗಂಧ ಅಶೋಕ ಯೆಳಚಿ ಹಿಪ್ಪೆಕಡಹ ಈ ಮೊದಲಾದವು ಶ್ರೇಷ್ಟವಾದವುಗಳು ಬನ್ನಿಮರ ಬಿಲ್ವ ಬೇವು ಇವುಗಳು ವರ್ಜ್ಯಗಳಾಗಿದ್ದರೂ ಆಯಾಯಾ ಜಾತಿಗೆಹೇಳುವದರಲ್ಲಿ ಪ್ರಶಸ್ತವೆಂದು ತಿಳಿಯಬೇಕು, ವರಾಹನು ....

ಶ್ಲೋ॥ ಸುರದಾರುಚಂದನಸಮಾಮಧುಕತರವಶ್ಶುಭಾಃದ್ವಿಜಾತೀನಾಂ ॥ ಕ್ಷತ್ರಸ್ಯಾರಿಷ್ಟಾಶ್ವತ್ಥಖದಿಲ್ವಾವೃದ್ಧಿಕರಾಃ । ವೈಶ್ಯಾನಾಂ ಜೀವಖದಿರಸಿಂಧೂರಕಸ್ಯಂದನಾಶ್ಚಶುಭಫಲದಾಃ ॥ ತಿಂದುಕಕೇಸರಸರಲಾರ್ಜುನೋತ್ಥಶಾಲಾಶ್ಚ ಶೂದ್ರಾಣಾಂ ॥ ಸರ್ವೇಷಾಂವಾತಸ್ತಾಸರ್ವೆವೃಕ್ಷಾಶ್ಚನಿಂದಿತಾನೋಚೇತ್ ॥

ತಾ ॥ ಬ್ರಾಹ್ಮಣರಿಗೆ ದೇವದಾರು, ಚಂದನ, ಹಿಪ್ಪೆ, ಇವು ಶ್ರೇಷ್ಠಗಳು, ಕ್ಷತ್ರಿಯರಿಗೆ ಬೇವು, ಅಶ್ವತ್ಥ, ಕಗ್ಗಲಿ ಬಿಲ್ವ, ಇವು ಶುಭಕರಗಳು, ವೈಶ್ಯರಿಗೆ ಕಗ್ಗಲಿ ಸಿಂಧೂರ, ಹುಲಿಗೆ ಇವು ಶುಭಕರವು, ಶೂದ್ರರಿಗೆ ತುಂಬರ, ಕೇಸರ, ದೇವದಾರು, ಮತ್ತಿ, ಶಾಲಾವೃಕ್ಷ, ಇವುಗಳು ಯೋಗ್ಯವಾದವುಗಳು, ನಿಂದ್ಯಗಳಾಗದೆ ಇದ್ದರೆ ಎಲ್ಲಾ ವೃಕ್ಷಗಳೂ ಶ್ರೇಷ್ಟವಾದವುಗಳು. ಇಲ್ಲಿ ನಿಂದಿತಗಳಾದ ವೃಕ್ಷಗಳೇ ಮೇಲೆ ಹೇಳಲ್ಪಟ್ಟವೆ. ಮತ್ತು ವ್ಯಾಸರು,

ಶ್ಲೋ॥ ಅನ್ಯವೇಶ್ಮ ಸ್ಥಿತಂದಾರುನೈವಾನ್ಯಸ್ಮಿನ್ ಪ್ರಯೋಜಯೇತ್ । ನತತ್ರವಸತೇಕರ್ತಾಂ ವನೇತ್ತತ್ರನಜಾವತೀ ॥

ಎಂದುನ್ನು ಸಮರಾಂಗಣದಲ್ಲಿ,—

ಶ್ಲೋ॥ ಇಷ್ಟಾಕಾಲೋಷ್ಟಪಾಷಾಣ ಮತ್ತಿಕಾಜೀರ್ಣಮಾಯಸಂ। ತೃಣಂಪರ್ಣಂ ಬುಧೈಃಪ್ರೋಕ್ತಂ ವಾರುಣಂನಗೃಹಾಯವೈ ॥

ಮತ್ತು ಶಾರ್ಙಧರನು,—

ನೂತನೇ ನೂತನಂಕಾಷ್ಟಂ ಜೀರ್ಣೇಜೀರ್ಣಂಪ್ರಶಸ್ಯತೇ || ಜೀ
ರ್ಣೇಚನ ಇಕನಂಕಾಷ್ಟಜೀರ್ಣಂತುನೂತನೇಶುಭಂ ||

ಅಂದರೆ- ಇತರ ಮನೆಗಳಿಗೆ ಹಾಕಿದ ಮರವೂ ಇಟ್ಟಿಕೆಯು ಹೆಂಟೆಯು ಕಲ್ಲು, ಮಣ್ಣು, ಕಬ್ಬಿಣ, ಯಲೆ, ಈ ಮೊದಲಾದ್ದು ಗೃಹಶಲ್ಯಗಳಾದ್ದರಿಂದ ಹೊಸಮನೆಗೆ ಉಪಯೋಗಿಸಬಾರದು. ಹಾಗೆ ಉಪಯೋಗಿಸಿದರೆ ಆ ಮನೆಯಲ್ಲಿ ಯಜಮಾನನು ವಾಸಮಾಡುವದಿಲ್ಲ. ಮರಣ ಉಂಟಾಗುವದು, ಹೊಸಮನೆಗೆ ಹೊಸಮರಗಳನ್ನು ಹಳೆ ಮನೆಗಳಿಗೆ ಹಳೆಯದೂ ಶುಭಕರವು, ಮತ್ತು ಹಳೇದಕ್ಕೆ ಹೊಸಸಾಮಾನು ಶ್ರೇಷ್ಠ ಹೊಸಮನೆಗೆ ಹಳೇದು ಕೂಡದು.



## ಮರ್ತ್ಯಗಳನ್ನು ತರುವ ಲಕ್ಷಣ.

ಶ್ಲೋ|| ಸುದಿನೇಷ್ಟೇವಾರನಕ್ಷತ್ರ ಸುಯೋಗೇಕರಣಾನ್ವಿತೇ | ಚಂದ್ರಾನುಕೂಲಗೆ ಪ್ರಾಪ್ತೆ ಸುಲಗ್ನೇ ಶುಕ್ಲಪಕ್ಷಗೆ || ತಕ್ಷಣಂಭೃತ್ಯವರ್ಗೇ ಚಪೂಜಯಿತ್ವಾ ಸದಾನತಃ ಪ್ರೇಷಯೆದಧಿಪಸ್ತೇಶು ಸಾಯಂಗಚ್ಛದ್ವನಾಂತರಂ ||

ಟೀ|| ಶುಭವಾದ ದಿನ ನಕ್ಷತ್ರವಾರ ಯೋಗೆ ಕರಣಗಳಿಂದಾ ಕೂಡಿದ ಸಮಯದಲ್ಲಿ ಚಂದ್ರತಾರಾ ಬಲವನ್ನು ನೋಡಿಕೊಂಡು ಶುಕ್ಲಪಕ್ಷದಲ್ಲಿ ಒಳ್ಳೆಯ ಲಗ್ನದಲ್ಲಿ ಮರಗಳನ್ನು ಕಡಿಯತಕ್ಕ ಜನರನ್ನು ಮತ್ತು ಶಿಲ್ಪಾಚಾರ್ಯನನ್ನು ಗಂಧ ಪುಷ್ಪಾದಿಗಳಿಂದ ತೃಪ್ತಿಗೊಳಿಸಿ ನೂತನ ವಸ್ತ್ರಗಳನ್ನು ತಾಂಬೂಲವನ್ನು ಕೊಟ್ಟು ಅವರನ್ನ ಅರಣ್ಯಕ್ಕೆ ಕಳುಹಿಸಬೇಕು ಅವರು ಆ ದಿನ ಸಾಯಂಕಾಲಕ್ಕೆ ವನಕ್ಕೆ ಹೋಗಿ ಅವರ ವರ್ಣ ಜಾತಿ ವೃಕ್ಷಗಳ ಕೆಳಗೆ ಕುಳಿತುಕೊಳ್ಳತಕ್ಕದ್ದು.

ಶ್ಲೋ|| ಅಸನೋದೇವದಾರುಶ್ಚ ಮಧೂಕಶ್ಚಂದನಸ್ತಥಾ | ದ್ವಿಜವೃಕ್ಷಾಃ ಕ್ಷತ್ರವೃಕ್ಷಾಃ ಖದಿರಾಶ್ವತ್ಥಬಿಲ್ವಕಾಃ| ದೇವದಾರುಮಧೂಕಶ್ಚ ಚಂದನೊವೈಶ್ಯಜಾತಯಃ | ನಾಲಾರ್ಜುನಾಮ್ರಚಾಷ್ಠಯಾಸು ವಸೇಯುರ್ನಿಶಿಪಾದತಾಃ ||

ಟೀ|| ಹೊನ್ನೆ, ದೇವದಾರು, ಹಿಪ್ಪೆ, ಶ್ರೀಗಂಧ ಈ ವೃಕ್ಷಗಳ ಕೆಳಗೆ ಬ್ರಾಹ್ಮಣರನ್ನು ಕಗ್ಗಲಿ, ಅಶ್ವತ್ಥ, ಬಿಲ್ವ, ಈ ಮರಗಳ ಕೆಳಗೆ ಕ್ಷತ್ರಿಯರು

ದೇವದಾರು, ಹಿಪ್ಪೆ, ಶ್ರೀಗಂಧ ಈ ವೃಕ್ಷಗಳ ಕೆಳಗೆ ವೈಶ್ಯರು. ಶಾಲ ವೃಕ್ಷ ಮತ್ತಿನಲ್ಲಿ ಈ ಮರಗಳ ಕೆಳಗೆ ಶೂದ್ರರೂ ಈ ಪ್ರಕಾರ ಅವರವರ ಜಾತಿವೃಕ್ಷಗಳ ಕೆಳಗೆ ಆ ರಾತ್ರಿಯಲ್ಲಿ ನಿಲ್ಲತಕ್ಕದ್ದು.

ಶ್ಲೋ॥ ಇಷ್ಟದೇವಾನ್ ಪಿತೄನ್ ನಾಗಾನ್ ದೈತ್ಯಾಂಶ್ಚೈವ ಗಣಾಧಿಪಂ । ರವಿಚಂದ್ರೌಚಸಾಧ್ಯಾಂಶ್ಚ ಪೂಜಯೇದ್ವಿಧಿನಾತತಃ ॥

ಟೀ॥ ಈ ಪ್ರಕಾರ ಅವರು ಆ ರಾತ್ರಿಯಲ್ಲಿ ಆ ಮರಗಳ ಕೆಳಗೆ ಸಾರಿಸಿ, ರಂಗವಲ್ಲಿ ಮೊದಲಾದವುಗಳಿಂದಾ ಅಲಂಕರಿಸಿ ಶುಚಿಯಾಗಿ ತಮ್ಮ ತಮ್ಮ ಇಷ್ಟ ದೇವತೆಗಳನ್ನು, ಪಿತೃ ದೇವತೆಗಳನ್ನು, ಸರ್ವ ದೇವತೆಗಳನ್ನು ರಾಕ್ಷಸರನ್ನು, ವಿಘ್ನೇಶ್ವರನನ್ನು, ಸೂರ್ಯ ಚಂದ್ರರನ್ನು ಆವಾಹನೆ ಮಾಡಿ ಷೋಡಶೋಪಚಾರಗಳಿಂದಾ ಪೂಜಿಸಿ, ನಮಸ್ಕರಿಸಿ, ಆ ರಾತ್ರಿ ಅಲ್ಲಿಯೆ ಇರತಕ್ಕದ್ದು.

ಶ್ಲೋ॥ ಪ್ರಾತರುತ್ಥಾಯತಾನ್ ವೃಕ್ಷಾನ್ ಜಲೈಸ್ಸಂಪ್ರೋಕ್ಷ್ಯಭಕ್ತಿತಃ । ತತ್ಪ್ರಾಗುತ್ತರಮೂಲಾನಿ ಮಧ್ವಾಜ್ಯೈರ್ಲೇಪಯೇತ್ತತಃ ॥

ಟೀ॥ ಬಳಿಕ ಬೆಳಿಗ್ಯೆ ಯೆದ್ದು ಆ ಮರಗಳನ್ನು ನೀರಿನಿಂದಾ ಪ್ರೋಕ್ಷಿಸಿ ಪೂರ್ವೋತ್ತರ ದಿಕ್ಕುಗಳಲ್ಲಿರುವ ಅವರ ಬೇರುಗಳಿಗೆ ಭಕ್ತಿಯಿಂದಾ ಜೇನು ತುಪ್ಪದಿಂದಾ ಲೇಪಿಸಿ, ನಮಸ್ಕಾರ ಮಾಡಿ ಇಷ್ಟ ದೇವತಾದಿಗಳನ್ನು ಸ್ಮರಿಸತಕ್ಕದ್ದು.

ಶ್ಲೋ॥ ತತಃಕುಠಾರಗಾತ್ರಂಚತದ್ವೃಕ್ಷಾಣಾಮನಂತರಂ । ಪ್ರದಕ್ಷಿಣಂ ವಂದನಂಚ ಕೃತ್ವಾಗಚ್ಛೇದ್ಯಥೇಚ್ಛಯಾ ॥

ಟೀ॥ ಅನಂತರ ಕೊಡ್ಲಿಗಳನ್ನು ಕುಡಿಗೋಲುಗಳನ್ನು ಕುರಿತು ನಮಸ್ಕರಿಸಿ ಆ ಮರಗಳಿಗೆ ಪ್ರದಕ್ಷಿಣ ಮಾಡಿ ಆಮೇಲೆ ತಮ್ಮ ಮನಸ್ಸು ಬಂದ ಹಾಗೆ ಮರಗಳನ್ನು ಕಡಿಯಲಿಕ್ಕೆ ಹೋಗಬೇಕು.

ಶ್ಲೋ॥ ರಾತ್ರಾವಾಶ್ರಯವೃಕ್ಷಾಂಶ್ಚ ಕುಲಂನಚ್ಛೇದಯೇತ್ತರುಂ । ಉದಙ್ಮುಖಃಪ್ರಾಙ್ಮುಖಂವಾಛಿಂದ್ಯಾದ್ವೃಕ್ಷಂಚಶೋಭನಂ ॥

ಟೀ॥ ರಾತ್ರಿ ಹೊತ್ತು ತಾವು ನಿಂತಿದ್ದ ವೃಕ್ಷಗಳನ್ನು ಮತ್ತು ಕುಲ ವೃಕ್ಷಗಳನ್ನು ಕಡಿಯಬಾರದು. ಮರವನ್ನು ಕಡಿಯುವಾಗ ಉತ್ತರಮುಖವಾಗಿಯಾಗಲಿ, ಪೂರ್ವಮುಖವಾಗಿ ಆಗಲಿ ಕಡಿಯಬೇಕು. ಹೀಗೆ ಮಾಡಿದರೆ ಶುಭಕರವು. ವೃಕ್ಷಚ್ಛೇದನವ ಮಾಡುವಾಗ,—

ಶ್ಲೋ॥ ಯಾನೀಹ ಭೂತಾನಿವಸಂತಿತಾನಿ ಬಲಿಂಗೃಹೀತ್ವಾವಿಧಿವತ್ಪ್ರಯುಕ್ತಾಂ । ಅನ್ಯತ್ರವಾಸಂಪರಿಕಲ್ಪಯಂತು ಕ್ಷಮಂತುತಾನ್ಯದ್ಯನಮೋಸ್ತುತೇಭ್ಯಃ ॥

ಯೆಂಬ ಪ್ರಾರ್ಥನೆಯಂ ಮಾಡಿ ತಮ್ಮ ತಮ್ಮ ಇಷ್ಟದೇವತೆಗಳನ್ನು ಗಣಪತಿಯನ್ನು ಪ್ರಾರ್ಥನೆ ಮಾಡಿ ಕಡಿಯಬೇಕು

ಶ್ಲೋ॥ ಪೂರ್ವೇಚೋತ್ತರ ಕಾಷ್ಠಾಯಾಂ ಈಶಾನ್ಯೇಂಚತಥಾದಿಶ। ಪತಿತಂಚೋತ್ತಮಂ ವಿಂದ್ಯಾನ್ಯೆದಿಕ್ಷುವಿವರ್ಜಯೇತ್ ॥

ಟೀ ॥ ಹೀಗೆ ಕಡಿಯಲ್ಪಟ್ಟ ಮರಗಳು ಪೂರ್ವ, ಉತ್ತರ, ಈಶಾನ್ಯ, ಈ ದಿಕ್ಕುಗಳಲ್ಲಿ ತುದಿಗಳು ಬಿದ್ದರೆ ಉತ್ತಮ ಮಿಕ್ಕಾದ ದಿಕ್ಕುಗಳಲ್ಲಿ ಬಿದ್ದವುಗಳನ್ನು ಬಿಡತಕ್ಕದ್ದು.



## ಮರಗಳ ಬಣ್ಣ ಲಕ್ಷಣ

ಶ್ಲೋ॥ ಛೇದನೇದಳನೇವಾಪಿಮಂಡಲಾಯತ್ರದೃಶ್ಯತೇ । ಶ್ವೇತಕೇ ಮಂಡಲೇಗೋಧಾ । ದೀರ್ಘಕೃಷ್ಣೇತುವಾತಭುಕ್ ॥ ತರಕ್ಷಿತ್ಯೈಲ ವರ್ಣೇತುವೃಶ್ಚಿಕಂತತ್ರನಿರ್ದಿಶೇತ್।ಕಪಿಲೋಮೂಷಕಃಪ್ರೋಕ್ತೋ ಮಂಜಿಷ್ಠೇನಚದುರ್ದರಂ । ಪಾರಾವತನಿಭೇವರ್ಣೇಗೃಹಗೋಧಾಂ ವಿನಿರ್ದಿಶೇತ್ ॥ ಗುಡವರ್ಣೇನಪಾಷಾಣಂ ವೃಕ್ಷಾಣಾಂ ಚೈವಮಾದಿಶೇತ್ ॥

ಟೀ ॥ ಮರಗಳನ್ನು ಕಡಿಯುವಾಗ ಆಗಲಿ ಶೀಳಿಸುವಾಗ ಆಗಲಿ ಅವುಗಳಲ್ಲಿ ಗುಂಡಾಗಿ ಬಿಳೀಮಚ್ಚೆಯಿದ್ದರೆ ಅದರಲ್ಲಿ ಹಲ್ಲಿ ಯಿರುವದು, ಉದ್ದವಾಗಿ ಕರೀಮಚ್ಚೆಯಿದ್ದರೆ ಹಾವಿರುವದು, ಅಡ್ಡಲಾಗಿ ಎಣ್ಣೆವರ್ಣವುಳ್ಳ ಮಚ್ಚೆಯಿದ್ದರೆ ಅಲ್ಲಿ ಚೇಳಿರುವದು ಹಸರು ಬಣ್ಣವುಳ್ಳ ಮಚ್ಚೆಯಿದ್ದರೆ ಇಲಿ ಇರುವದು, ಕೆಂಪು ಮಚೆ ಯಿದ್ದರೆ ಕಪ್ಪೆ ಇರುವದು, ಪಾರಿವಾಣದ ಹಕ್ಕಿಯ ಬಣ್ಣವುಳ್ಳ ಮಚ್ಚೆಯಿದ್ದರೆ ಮನೆಯ ಹಲ್ಲಿಯಿರುವದು, ಬೆಲ್ಲದ ವರ್ಣವುಳ್ಳ ಮಚ್ಚೆ ಇದ್ದರೆ ಕಲ್ಲಿರುವದು, ಈ ಪ್ರಕಾರ ದೋಷಗಳನ್ನು ತಿಳಿದು ನಿರ್ದೋಷವಾದವುಗಳನ್ನು ಪರಿಗ್ರಹಿಸತಕ್ಕದ್ದು.

## ಪುಲ್ಲಿಂಗಾದಿ ವೃಕ್ಷಗಳ ಲಕ್ಷಣ

ಶ್ಲೋ॥ ಸ್ತ್ರೀಪುನ್ನಪುಂಸಕಂಲಿಂಗಂವೃಕ್ಷಾಣಾಂಚಪರಿಕ್ಷಯೇತ್ ।

ಪರ್ಣಪೂಲಾಗ್ರರೇಖಾಯಾವಾಮದಕ್ಷಿಣಪಾರ್ಶ್ವಯೋಃ | ತತ್ಪಾ
ರ್ಶ್ವರೇಖಾಗೇಣಸಂಕುರ್ಯಾದ್ಧಿಷ್ಣಾನ್ಯಯತ್ನತಃ | ವಾಮಭಾಗೇತು
ಯುಗ್ಮಾಸ್ಯಾದ್ದಕ್ಷಿಣೆವಿಷಮಾಭವೇತ್ | ಏವಂರೇಖಾಪ್ರಕಾರೇಣ
ಸ್ತ್ರೀಲಿಂಗಂವೃಕ್ಷಜಾತಿಷು | ವಾಮಭಾಗೇದ್ವಿಯುಗ್ಮೇಚಯುಗ್ಮಂಗೆ
ಣ್ಯಂತುದಕ್ಷಿಣೆ | ರೇಖಾಯಾಂವಣ್ಯಮಾನಾಯಾಂಪುರುಷೋವೃಕ್ಷ
ಜಾತಿಷು ||

ಟೀ || ಮರಗಳಿಗೆ ಪುರುಷಜಾತಿ ಸ್ತ್ರೀಜಾತಿ ನಪುಂಸಕ ಜಾತಿಗಳನ್ನು ಹೇಳುತ್ತಾನೆ, ಒಳ್ಳೆಮೃದುವಾದ ಯೆಲೆಯನ್ನು ತೆಗೆದು ಅದರಮೊದಲು ನಿಂಹಾ ತುದಿವರಿವಿಗೂ ಇರುವ ದೊಡ್ಡರೇಖೆಗೆ ಎರಡು ಪಾರ್ಶ್ವಗಳಲ್ಲಿಯೂ ಇರುವ ಅಡ್ಡರೇಖೆಗೆ ಯೆಣಿಸಲಾಗಿ ಎಡಗಡೆಯಲ್ಲಿ ಸಮಸಂಖ್ಯೆಯಾಗಿಯೂ ಬಲಗಡೆಯಲ್ಲಿ ವಿಷಮ ಸಂಖ್ಯೆಯಾಗಿಯೂ ಇದ್ದರೆ ಸ್ತ್ರೀವೃಕ್ಷವು ಎಡಗಡೆ ಬೇಸಿ ಯಾಗಿಯೂ ಬಲಗಡೆ ಸಮನಾಗಿಯೂ ಇದ್ದರೂ ಪುರುಷವೃಕ್ಷವೆಂತ ತಿಳಿಯಬೇಕು.

ಶ್ಲೋ || ವಾಮದಕ್ಷಿಣರೇಖಾಶ್ಚ ಸಮೇವಾವಿಷಮಾಪಿವಾ | ನಪುಂ
ನಕಇತಿಖ್ಯಾತೋಯತೀನಾಂಶುಭದಸ್ಮೃತಃ ||

ಟೀ || ಎರಡು ಪಾರ್ಶ್ವಗಳಲ್ಲಿಯೂ ಸಮವಾಗಲೀ ವಿಷಮಗಳಾಗಲಿ ನರಿಯಾಗಿದ್ದರೆ ನಪುಂಸಕ ವೃಕ್ಷವೆಂದು ತಿಳಿಯಬೇಕು. ಇದು ಯತಿಗಳಿ ಗೆ ಶ್ರೇಷ್ಠವಾದದ್ದು.

ಶ್ಲೋ|| ದೇವಾನಾಂ ಮಾನವಾನಾಂಚ ಪುಂಸ್ತ್ರೀಲಿಂಗಾ ಶ್ಶುಭಾ
ವಹಾಃ| ನಪುಂಸಕಾಯತೀನಾಂತುಶುಭದಾಃಪರಿಕೀರ್ತಿತಾಃ ||

ಟೀ|| ದೇವತೆಗಳಿಗೂ ಮನುಷ್ಯರಿಗೂ ಪುಲ್ಲಿಂಗ ಸ್ತ್ರೀಲಿಂಗ ವೃಕ್ಷ ಗಳು ಶ್ರೇಷ್ಟವಾದವುಗಳು, ಯತಿಗಳಿಗೆ ನಪುಂಸಕ ವೃಕ್ಷಗಳು ಶ್ರೇಷ್ಟವು.

## ಸ್ತಂಭಗಳ ಲಕ್ಷಣ.

ಶ್ಲೋ|| ಮೃದುಸ್ತಂಭೋಬಲೀಕಾರ್ಯಶ್ಚತುರಸ್ರಸ್ತುಶೋಭನಃ | ವಲ
ಯಃಪುತ್ರವೃದ್ಧಿಸ್ಯಾದಷ್ಟಪಟ್ಟಸ್ತುಶೋಭನಂ | ಷೋಡಶಃಪುತ್ರಲಾ
ಭಂಚಕುಟಿಲಃಪುತ್ರನಾಶನಂ | ವಕ್ರಃಕರ್ತಾದರಿದ್ರಂಚಶಿಥಿಲೋ
ಮರಣಂತಥಾ ||

ಟೀ|| ಹುಟ್ಟಿದ ಸ್ತಂಭವು ಹಾಗೆಯೆ ನೆಟ್ಟಗೆ ಇದ್ದರೆ ಬಲವಾದದ್ದು

ನಾಲ್ಕು ಪಟ್ಟಿಗಳುಳ್ಳದ್ದು ಶುಭವಾದದ್ದು ಗುಂಡಾಗಿರುವದು ಸಂತಾನವೃದ್ಧಿಯನ್ನುಂಟುಮಾಡುತ್ತದೆ. ಎಂಟು ಪಟ್ಟಿಗಳುಳ್ಳದ್ದು ಶುಭವನ್ನುಂಟುಮಾಡುತ್ತೆ, ಹದಿನಾರು ಪಟ್ಟಿಗಳುಳ್ಳದ್ದು ಪುತ್ರರಂ ಕೊಡುತ್ತೆ ಹುಳು ಹಿಡಿದಿರುವವಾಗಲಿ ಕೆಟ್ಟು ಹೋಗಿರುವದಾಗಲಿ ಆದರೆ ಪುತ್ರನಾಶನವನ್ನು ಮಾಡುವದು, ವಕ್ರನಾಗಿರುವದು, ಯಜಮಾನನಿಗೆ ದಾರಿದ್ರ್ಯವನ್ನುಂಟು ಮಾಡುವದು. ಮುರಿದ ಸ್ತಂಭವು ಮರಣವನ್ನುಂಟುಮಾಡುವದು.

ಶ್ಲೋ॥ ವಲಯಂದ್ವಾದಶಾಂಗುಳ್ಯಂತದಾದಿಸ್ತಸ್ಯವೃತ್ತಕೆ/ಅಷ್ಟಾಧಿಕಶತಂವೃಧ್ಯಾನಧಾನ್ಯಸುತಪ್ರದಃ । ಚತುರ್ವಿಂಶತಿಸರ್ವೇಷಾಂ ದ್ವಾತ್ರಿಂಶಶ್ಶುಭದಂಭವೇತ್॥ಚತುರಸ್ರಪಟಸ್ತಂಭಾಪಾರ್ಶ್ವಮಾನಂ ವಿಧಾನತಃ ॥ ಷಡಂಗುಳಿ ಮಿತಂಯಪ ದಷ್ಟಾದಶ ಮಿತಾಂಗುಳಂ । ಸ್ತಂಭಮಾನಂ ಪೃಟಂಚ್ಯೈವಹ್ಯೆನಾಧಿಕ್ಯಂನಕಾರಯೇತ್ ॥

ಟೀ॥ ಗುಂಡುಗಂಭಗಳಿಗೆ ಸುತ್ತಳತೆಯ ೧೨ಅಂಗುಲ ಮೊದಲುಗೊಂಡು ೧೦೮ ಅಂಗುಳಗಳವರಿವಿಗೂ ತನಗೆ ಇಷ್ಟಬಂದಷ್ಟು ಇಡಬಹುದು. ಅದು ಧನವು ಧಾನ್ಯವು ಸಂತಾನವು ಉಂಟುಮಾಡುವದು ಎಲ್ಲರಿಗೂ ೨೪ ಅಂಗುಳಗಳು ೩೨ಅಂಗುಳಗಳು ಶುಭಕರವಾದದ್ದು, ಚತುರಶ್ರವಾದ ಕಂಭಗಳು ಪ್ರತಿಒಂದು ಪಾರ್ಶ್ವದಲ್ಲಿಯೂ ೬ಅಂಗುಳ ಮೊದಲ್ಗೊಂಡು ೧೮ ಅಂಗುಳಗಳ ಪರ್ಯಂತರವೂ ಇಡಬಹುದು, ಈ ಪ್ರಕಾರ ಪ್ರಮಾಣಕ್ಕೆ ಅಧಿಕವೇ ಆಗಲಿ ಕಮ್ಮಿಯೇ ಆಗಲಿ, ಮಾಡಬಾರದು.

ಶ್ಲೋ॥ ಸ್ತಂಭೆಸ್ಯಾದ್ವರ್ತುಳಾಕಾರೆಪ್ಪಾದಮಾನಂತ್ರಿಭಾಗಕಂ ।ಅಗ್ರಮಾನಂದ್ವಿಭಾಗಾರ್ಧಂಸ ಂಭೆಸ್ಯಾದ್ಭೂಷಣಂಕ್ರಮಾತ್ ॥

ಟೀ॥ ಗುಂಡುಕಂಬಗಳ ಮೊದಲು ಸುತ್ತಳತೆ ೩ ಭಾಗಮಾಡಿ ತುದಿಯಲ್ಲಿ ೨॥ ಭಾಗ ಸುತ್ತಳತೆ ಮಾಡುವದು ಹೀಗೆ ಮಾಡಿದರೆ, ಅಲಂಕಾರವಾಗಿರುವದು.

ಶ್ಲೋ॥ ಚತುರಶ್ರೇಸಮಂಪಾರ್ಶ್ವಂ ಪಾರ್ಶ್ವಮೂಲಂವಿಧಾನತಃ । ನವಭಾಗಂ ಗಾಢಮಾನಂಶಿರೋಗ್ರಂಸಪ್ತಭಾಗಕಂ ॥ ಸ್ತಂಭೊರ್ಧ್ವಮಾನಭಾಗಾಷ್ಟಂಸ್ತಂಭವಿಸ್ತಾರಭಾಗಕಂ । ನವಭಾಗಂತದೂರ್ಧ್ವಂಚಏಕಭಾಗಂತುವಿಸ್ತರಂ । ಯದಿದಂಸ್ತಂಭಮಾನಂಚಬ್ರಹ್ಮವಾಸ್ತುಕ್ರಮಂಚರೇತ್ ॥ .... ....

ಟೀ|| ಚೌಕವಾದ ಸ್ತಂಭಗಳಿಗೆ ಮೂರು ಪ್ರಕಾರವಾಗಿ ಲಕ್ಷಣಗಳನ್ನು ಹೇಳುತ್ತಾನೆ ೧ನೇದು ಸ್ತಂಭದ ಪಾರ್ಶ್ವಪಟ್ಟಿಗಳು ನಾಲ್ಕು ಕಡೆಯೂ ಸಮವಾದಅಳತೆಯುಳ್ಳದ್ದಾಗಿರಬೇಕು. ಮೊದಲಲ್ಲಿ ಪಟ್ಟಿಯು ಅಳತೆಯನ್ನು ೯ ಭಾಗಮಾಡಿ ಅದರಲ್ಲಿ ೭ ಭಾಗಗಳು ತುದಿಯಲ್ಲಿ ಮಾಡಬೇಕು ೨ನೇದು ತುದಿಯಲ್ಲಿ ೮ ಭಾಗಮಾಡಿ ೩ನೇದು ಸ್ತಂಭವನ್ನು ೯ ಪಾಲುಮಾಡಿ ಒಂದು ಭಾಗವನ್ನ ಪಾರ್ಶ್ವದಲ್ಲಿ ಮಾಡುವದು ಈಪ್ರಕಾರ ಯಾವದಾದರೂ ಆಗ ಬಹುದು ಸ್ತಂಭಗಳ ಲಕ್ಷಣವನ್ನು ಬ್ರಹ್ಮವಾಸ್ತು ಪ್ರಕಾರ ಮಾಡ ತಕ್ಕದ್ದು.

ಶ್ಲೋ|| ಸ್ತಂಭಾಗ್ರಂಚಶಮಿಾಕಾರಂ ಮೂಲಸ್ಥೂಲಂಶುಭಂಭವೇತ್ | ಅಗ್ರಂಚಜೀರ್ಣಮಾಕಾರಂ ಗೋವಾಲೇನಸಮಂಭವೇತ್‌ತು ಳಿಕಾರಂಧ್ರಪಾನಾಸ್ಯಾಚ್ಛಿಕಾಕಾರಾಪ್ರಯತ್ನತಃ | ಮೂಲಮಗ್ರಂ ಸಮಂನ್ಯಾಚ್ಛೇದಗ್ನಿದಹ್ಯಂತುನಿಷ್ಫಲಂ | ಅಗ್ರಸ್ಥೂಲಂದರಿದ್ರಂಸ್ಯಾಚ್ಛಿಖಾಮಾನಮಿದಂಕುರು ||

ಟೀ|| ಸ್ತಂಭಗಳ ಕೊನೆಯಲ್ಲಿ ಬೋದಿಗೆಗಳು ಬಿಗಿಸುವದರಲ್ಲಿ ಮಾಡುವ ಕೊಲುಗಳು ಮೊದಲು ದಪ್ಪವಾಗಿಯೂ ತುದಿಯು ಗೋಪುಚ್ಛದಂತೆ ಸಂಣ ವಾಗಿಯೂ ಇದ್ದರೆ ಶುಭವಾಗಿರುವದು. ಮೊದಲು ತುದಿಯು ಸಮಾಸವಾಗಿದ್ದರೆ ಆ ಮನೆಯು ಅಗ್ನಿಯಿಂದ ದಹಿಸಲ್ಪಡುವದು ತುದಿಯಲ್ಲಿ ದಪ್ಪವಾಗಿದ್ದರೆ ಯಜಮಾನನಿಗೆ ದಾರಿದ್ರ್ಯವುಂಟಾಗುವದು.

ಶ್ಲೋ|| ಸ್ತಂಭಸ್ಯಾಗ್ರಶಿಖಾಮಾನಂಬೋದಿತಾಂತಂತುಲಾಂತಕಂ | ಭದ್ರಿಕಾಪಟ್ಟಿತಾಂತಂಚಶಿಖಾಯಾಉನ್ನತಂ ಹಿತಂ | ಭೂಷಣಂರಂಧ್ರಮಾನಂಚಶಿಖಾದೋಷವಿವರ್ಜಿತಾ || ಪ್ರತಿಕೂಲಶಿಖಾಕಾರಂಗ್ರಹದಾಹಫಲಂಭವೇತ್ ||

ಟೀ|| ಸ್ತಂಭಗಳ ತೊಲೆಗಳು, ಬೋದಿಗೆ. ದೂಲ, ಭದ್ರಪಟ್ಟಿಕೆ ಇವುಗೆಳಿಗೆ ತಕ್ಕಷ್ಟು ಪ್ರಮಾಣವಿರಬೇಕು. ಬೋದಿಗೆಗಳ ಮತ್ತು ದೂಲಗಳ ರಂಧ್ರಕ್ಕೆ ಸರಿಯಾದ ದಪ್ಪವಿರಬೇಕು. ಹೀಗೆ ಮಾಡದೆ ಮೊದಲು ದೂಲಗಳನ್ನು ಹಾಕಿದ್ದಾದರೆ ಆ ಮನೆಯಲ್ಲಿ ಗ್ರಹಪೀಡೆಯುಂಟಾಗುತ್ತೆ.

## ಬೋದಿಗೆಗಗಳ ಲಕ್ಷಣ

ಶ್ಲೋ|| ಬೋದಿಕಾಮೂಲಮಗ್ರಂ ಚದೀರ್ಘಪಾರ್ಶ್ವಘನಂತಥಾ |

ಶಾಸ್ತ್ರವಿಸ್ತಾರಕಂತ್ವಶಾತ್ವಬ್ರಹ್ಮವಾಸ್ತುವಿಧೀಯತೇ | ದೀರ್ಘಮ
ಷ್ಟಾಂಗುಳಂಪ್ರೋಕ್ತಂಘನಂಷಷ್ಟಾಂಗುಳಂಮತಂ| ದ್ವಾದಶಾಂಗು
ಳಮಾನಸ್ಯಘನಮಂಗುಳಸಪ್ತಕಂ | ಷೋಡಶಾಂಗುಳಮಾನಸ್ಯಘನ
ಮಂಗುಳಸಪ್ತಕಂ | ಅಷ್ಟಾದಶಾಂಗುಳಂದೀರ್ಘಂಭೂಷಣಂಚತು
ರಂಗುಳಂ | ವಿಂಶತ್ಯಾಂಗುಳಪ್ರಮಾಣಸ್ಯಷಡಂಗುಳಮಿತಂಘನಂ |
ಚತುರ್ವಿಂಶಾಂಗುಳಂದೀರ್ಘಂಪಾರ್ಶ್ವಮಾನಂಷಡಂಗುಳಂ | ಹಸ್ತ
ಪಾದಸಮಾಯುಕ್ತಂಪಾರ್ಶ್ವವಿಸ್ತಾರಕಂದಶ| ಹಸ್ತಾರ್ಧಸಮಮಾ
ಕಾರಮಷ್ಟಾಂಗುಳವಿಭೂಷಣಂ | ಪಾದಹೀನಂದ್ವಿಹಸ್ತಂಚದ್ವಾದ
ಶಾಂಗುಳವಿಸ್ತರಂ | ದ್ವಿಹಸ್ತಂದೀರ್ಘಮಾಕಾರಂದಶಾಂಗುಳ್ಯಂತು
ಭೂಷಣಂ | ಏವಂತುಬೋಧಿಕಾಮಾನಂಸರ್ವದೋಷವಿನಾಶಕೃತ್||

ಟೀ|| ಬೋದಿಗೆಗಳಿಗೆ ಲಕ್ಷಣವನ್ನು ಹೇಳುತ್ತಾನೆ. ೮ ಅಂಗುಲ ಉದ್ದವು
ಳ್ಳದ್ದಕ್ಕೆ ೬ ಅಂಗುಲ ಗಾತ್ರವೂ ೧೨ ಅಂಗುಳ ಉದ್ದಕ್ಕೆ ೭ ಅಂಗುಳ
ಗಾತ್ರವು, ೧೬ ಅಂಗುಳ ದೀರ್ಘಕ್ಕೆ ೫ ಅಂಗುಳ ಗಾತ್ರವು ೧೮ ಅಂಗು
ಳಕ್ಕೆ ೪ ಅಂಗುಳ ಗಾತ್ರವು, ೨೦ ಅಂಗಳ ದೀರ್ಘಕ್ಕೆ ೬ ಅಂಗುಳಗಾ
ತ್ರವು, ೨೪ ಅಂಗುಳಕ್ಕೆ ೬ ಅಂಗುಳ ಗಾತ್ರವು, ೩೦ ಅಂಗುಳ ದೀರ್ಘ
ಕ್ಕೆ ೧೦ ಅಂಗುಳ ಪಾರ್ಶ್ವ ವಿಸ್ತಾರವು, ೩೬ ಅಂಗುಲ ಉದ್ದಕ್ಕೆ ೮ ಅಂ
ಗುಳ ಗಾತ್ರವು, ೪೧ ಅಂಗುಲ ದೀರ್ಘಕ್ಕೆ ೧೨ ಅಂಗುಳ ಗಾತ್ರವೂ ೪೮
ಅಂಗುಳ ದೀರ್ಘವುಳ್ಳ ಬೋದಿಗೆಗೆ ೧೦ ಅಂಗುಳ ಗಾತ್ರವೂ ಮಾಡಬೇಕು
ಈ ಪ್ರಕಾರ ಬೋದಿಗೆಗಳನ್ನು ಮಾಡಿದರೆ ಸಕಲ ದೋಷಗಳೂ ನಿವಾರಣೆ
ಯಾಗುವದು.

## ಬೋದಿಗೆಗಳ ಮುಂದೆ ತಾಳವಾರಕ್ಕಾಗಿ ಹಾಕುವ ಗೂಟದ ಲಕ್ಷಣಗಳು

ಶ್ಲೋ|| ಸ್ತಂಭೋನ್ನತಪ್ರಮಾಣಂಚತ್ರಿಭಾಗಂಚತುರಂತಥಾ | ಅಥ
ವಾಪಂಚಭಾಗಂಚತದುಕ್ತಂಬೋದಿಕೀಲಕಂ | ತದ್ಪಾದಾಂಶಂಕೃ
ತಂಚೈವಯುಕ್ತ್ಯಾಸರ್ವೋಪರಿನ್ಯಸೇತ್ ||

ಟೀ|| ಸ್ತಂಭವನ್ನ ಮೊದಲಿನಿಂದಾ ಕೊನೆವರಿಗೂ ಅಳತೆಮಾಡಿ ೩ ಭಾಗೆ
ವಾಗಲಿ ೪ ಭಾಗವಾಗಲಿ, ೫ ಭಾಗವಾಗಲೀ ಮಾಡಿ ಅವುಗಳಲ್ಲೊಂದು
ಭಾಗವನ್ನ ಗೂಟಮಾಡಬೇಕು, ಅದರ ಉದ್ದವನ್ನು ೪ ಭಾಗೆಮಾಡಿ ೧

ಭಾಗವನ್ನು ಪಾರ್ಶ್ವ ಖಂಡಗಳು ಮಾಡಬೇಕು ಇದರ ಮೇಲೆ ಯುಕ್ತಿ ತೋರಿಬಂದಂತೆ ಹ್ಯಾಗಾದರೂ ಅಲಂಕಾರವಾಗಿ ಮಾಡಬಹುದು.

ಚತುರಶ್ರ ಬೋದಿಗೆ ಲಕ್ಷಣ.

ಶ್ಲೋ|| ಚತುರಶ್ರಮುಖಂಬೋದಿಮಾನಂಪುಯುಮುಶಂತಥಾ |ಸ್ತಂಭಮೂಲಸ್ಯವಸ್ತಾರತ್ರಿತಯಂಬೋದಿದೀರ್ಘಕಂ ||

ಟೀ|| ಚೌಕವಾಗಿರತಕ್ಕ ಬೋದಿಗೆಗಳಿಗೆ ಮಯನ ಮತವೇನಂದರೆ, ಸ್ತಂಭದ ಮೊದಲು ವಿಸ್ತಾರಕ್ಕಿಂತಲೂ ೩ ಪಾಲು ಹೆಚ್ಚಾಗಿ ಬೋದಿಗೆಯನ್ನು ಮಾಡಬೇಕು.

ಶ್ಲೋ|| ರಂಜುಕಾಗ್ರೇಬೋದಿಕಾಗ್ರಂಮೂಲಂಮೂಲೇತುಯೋಜಯೇತ್ | ಅಗ್ರಮೂಲಂಶಿರಃಕೂಟಂ ಕಲಹೋರೋಗಸಂಕಟಂ | ಬೋದಿಕಾ ಪಾಳಿಕಾ ಕ್ರಾಂತಂಸ್ತಂಭಾಗ್ರೇದೂರ್ಧ್ವಘಾಳಿಕಾ | ತತದೂರ್ಧ್ವೇಗರ್ಭಮಾನ ಮಧೋನಕ್ತ್ರಂಸು ಸಮ್ಮುಖಂ ||

ಟೀ|| ದೂಲಗಳ ಮೂಲದಲ್ಲಿ ಬೋದಿಗೆಗಳ ಮೂಲವೂ ತುದಿಗಳಲ್ಲಿತುದಿಯೂ ಕೂಡಿಸಬೇಕು. ಹಾಗಿಲ್ಲದೆ ಮೊದಲಲ್ಲಿ ಕೊನೆಯೂ ತುದಿಯಲ್ಲಿ ಮೂಲವೂ ಸಂಧಿಸಿದರೆ ಕಲಹವೂ ರೋಗವೂ ಸಂಭವಿಸುವದು, ಸ್ತಂಭಗಳ ಮೇಲೆ ಇರುವ ಬೋದಿಗೆಯು ಊರ್ಧ್ವಮುಖವಾಗಿಯೂ ಅದರ ಮೇಲೆ ಇರುವ ಬೋದಿಗೆಯು ಅಧೋಮುಖವಾಗಿಯೂ ಕೂಡಿಸಬೇಕು.

ಶ್ಲೋ|| ರಂಧ್ರಮಾನಮಿದಂಪ್ರೋಕ್ತಂ ಬೋದಿಕಾಗ್ರಂವಿಶಾಲಕಃ ತ್ರಿಭಾಗಂಚ ಚತುರ್ಭಾಗಂ ಪಂಚಭಾಗಂ ಪ್ರಯತ್ನತಃ | ತದಂಶಂ ರಂಧ್ರಮಾನಂಸ್ಯಾ ದ್ಬೋಧಿಕಾ ರಂಜುಸಂಗ್ರಹಂ | ಅನ್ಯೇತುರಂಧ್ರಪರ್ಯ್ಯಾಯಾಸ್ತ್ರೀನಾಶಂ ಘಾತಶೂಲಕಂ ||

ಟೀ|| ಬೋದಿಗೆಗಳಿಗೆ ರಂಧ್ರ ಹಾಕಬೇಕಾದರೆ ಬೋದಿಗೆಯ ಅಗಲದ ಅಳತೆಯನ್ನು ೩—೪—೫ ಭಾಗಗಳನ್ನಾಗಿ ಮಾಡಿ ಅವುಗಳಲ್ಲೊಂದು ಭಾಗವನ್ನು ರಂಧ್ರಮಾಡುವದು, ಅಥವಾ ಸ್ತಂಭದ ತೊಲೆಗಳಿಗೆ ಸರಿಯಾಗಿ ರಂಧ್ರಮಾಡುವದು, ಹಾಗಲ್ಲದೆ ಹೋದರೆ ಸ್ತ್ರೀನಾಶವಾಗುವದು.

ಲೋವೆಗಳ ಲಕ್ಷಣ.

ಶ್ಲೋ || ಬೋಧಿಕಾಮುಖದೀರ್ಘಂಚ ತದಂಶಂತ್ವರ್ಧವಿಸ್ತರಂ |

ಕೋಣ್ಯೈಕಾಮಂಟಪಂಛಾಯಾ ವಾರಿಕಾತಾಳವಾರಕಂ ||

ಟೀ|| ಲೋವೆಗೆಳು, ಕೋಣಿಕಾ ಮಂಟಪಂ, ಛಾಯಾ, ಭಾರಿಕಾ, ಎಂಬ ದಾಗಿ ನಾಲ್ಕು ವಿಧಗಳಾಗಿರುವವು, ಬೋದಿಗೆಯ ಮುಖಕೀಲಕದ ವುಳ್ಳದ್ದನ್ನು ಅದರಲ್ಲಿ ಅರ್ಧಪ್ರಮಾಣವುಳ್ಳದ್ದು ಉತ್ತಮವು, ಅದರಲ್ಲಿ ಅರ್ಧಪ್ರಮಾಣವುಳ್ಳದ್ದು ಕನಿಷ್ಠವು.

ಶ್ಲೋ|| ಭಾರಿಕಾ ತಾಳವಾರಂಚ ಸ್ತ್ರೀಲಾಭಂ ಸರ್ವಮಂಗಳಂ |
ಕಾಣಿಕಾಪುತ್ರಲಾಭಂಚ ಛಾಯಾಶೋಭನಮುತ್ತಮಂ| ದಾರಿದ್ರ್ಯ
ಮಂಟಪಂಪ್ರೋಕ್ತಂ ಮಹಾಭಾರಿಂಪ್ರಕಲ್ಪಯೇತ್ ||

ಟೀ|| ಭಾರಿಕೆಯೆಂಬ ತಾಳವಾರವು ಸ್ತ್ರೀಲಾಭಗಳನ್ನು ಎಲ್ಲಾ ಶುಭಗೆ ಳನ್ನು ಕೊಡುತ್ತದೆ. ಕೋಣ್ಯೆಕೆಯೆಂಬ ತಾಳವಾರವು ಪುತ್ರ ಸಂಪತ್ತನ್ನುಂ ಮಾಡುವದು, ಛಾಯೆಯೆಂಬ ತಾಳವಾರವು ಶುಭವನ್ನುಂಟುಮಾಡುತ್ತದೆ. ಮಂಟಪ ತಾಳವಾರವು ದಾರಿದ್ರ್ಯವನ್ನುಂಟು ಮಾಡುವದು. ಆದ್ದರಿಂದ ಭಾರಿಯೆಂಬ ತಾಳವಾರವು ಸೌಭಾಗ್ಯಕರವಾದದ್ದು.

## ತೊ ಲೆ ಗೆ ಳ ಲ ಕ್ಷ ಣ.

ಶ್ಲೋ|| ಗಜಶ್ಚ ಮಹಿಷಶ್ಚೈವ ವೃಷಭಶ್ಚಾಜಏವಚ | ಉಪರ್ಯುಪ
ರಿವಿನ್ಯಸ್ಯಯೋಜನೀಯೋ ಯಥಾ ಕ್ರಮಂ | ಮೂಲೇದ್ವಾ
ರಂನಕುರ್ವೀತಮಧ್ಯಾಗ್ರೇಚನಿಯೋಜಯೇತ್ ||

ಟೀ|| ತೊಟ್ಟಿಗೆ ಹಾಕಲ್ಪಡುವ ನಾಲ್ಕುಕಡೆ ತೊಲೆಗಳು ಕ್ರಮವಾಗಿ ಪೂರ್ವದ ತೊಲೆ ಗಜವೆಂತಲೂ, ದಕ್ಷಿಣದ್ದು ಯಮ್ಮೆಯೆಂತಲೂ, ಪಶ್ಚಿಮದ್ದು ಯೆತ್ತೆಂತಲೂ, ಉತ್ತರದ್ದು ಟಗರೆಂತಲೂ ಅನ್ನಿಸಿಕೊಳ್ಳುವವು, ಇವುಗ ಗಳನ್ನ ಕ್ರಮವಾಗಿ ಮೂಡಲುಕಡೆಯ ತೊಲೆಯು ಪಾಳಿಯಮೇಲೆ ದಕ್ಷಿಣದ ತೊಲೆಯೂ, ದಕ್ಷಿಣದ ತೊಲೆಯ ಪಾಳಿಯಮೇಲೆ ಪಶ್ಚಿಮತೊಲೆ ಯೂ ಈ ಪ್ರಕಾರ ದಕ್ಷಿಣವಾಗಿ ಹಾಕಬೇಕು. ದ್ವಾರಗಳನ್ನಿಡುವಾಗ ತೊಲೆ ತುದಿಯಲ್ಲಾಗಲಿ ಮಧ್ಯದಲ್ಲಾಗಲಿ ಇಡಬೇಕೆ ಹೊರ್ತು ಬುಡದಲ್ಲಿ ಮಾಡಬಾರದು.

ಶ್ಲೋ || ತುಲಾಮೂಲಂಘನೆಂವಿತ್ತ ತಾಗ್ರೆಸ್ಥೂಲಂದರಿದ್ರತಾ |
ಮೂಲಾಗ್ರೆಯೋಸ್ಸಮಂಸ್ಥೂಲಂಶೋಭನಂಗೃಹಕರ್ತ್ರಸು | ಮಧ್ಯ
ಸ್ಥೂಲಾ ಮೃತಿಂಸ್ತ್ರೀಣಾಂ ಭಗ್ನಾಪೀಡಾಂದದಾತಿಚ | ತುಲಹೀ
ನಾತುಲಂರೋಗಂಬಲಹೀನಾಮೃತಿಂದಿಶೇತ್ ||

ಟೀ|| ತೊಲೆಗಳ ಬುಡವು ದಪ್ಪವಾಗಿದ್ದರೆ ಧನವೃಯವು ತುದಿಯು ದಪ್ಪವಾಗಿದ್ದರೆ ದರಿದ್ರವು, ಬುಡದಲ್ಲಿಯೂ ತುದಿಯಲ್ಲಿಯೂ ಸಮವಾಗಿದ್ದರೆ ಸೆಡುವಿನಲ್ಲಿ ದಪ್ಪನಾದರೆ ಭಾರ್ಯ್ಯಾಹಾನಿಯು ಶಿಥಿಲನಾದ ತೊಲೆಯು ಕಷ್ಟವನ್ನುಂಟುಮಾಡುವದು, ಜಾತಿಹೀನವಾದ್ದು ರೋಗವನ್ನುಂಟುಮಾಡುವದು, ಬಲವಿಲ್ಲದ ತೊಲೆಯು ಮರಣಪ್ರದವು

ಶ್ಲೋ|| ಪೂರ್ವಾಗ್ರಂಯೋಜಯೇದ್ವಂಶಮುತ್ತರಾಗ್ರಮಥಾಪಿವಾ |
ದಕ್ಷಿಣಾಗ್ರಂಪಶ್ಚಿಮಾಗ್ರಂವರ್ಜನೀಯಂಪ್ರಯತ್ನತಃ ||

ಟೀ|| ತೊಲೆಗಳೂ ಚಾವಣಿಗಳು, ಜಂತೆಗಳು, ಮೊದಲಾದವೆಲ್ಲಾ ಪೂರ್ವದ ಕಡೆಯಾಗಲಿ ಉತ್ತರದ ಕಡೆಯಾಗಲಿ ತುದಿಗಳು ಬೀಳುವಂತೆ ಹಾಕಬೇಕೇ ಹೊರತು ದಕ್ಷಿಣ ಪಶ್ಚಿಮಕಡೆ ಬೀಳುವಹಾಗೆ ಹಾಕಬಾರದು.

ಶ್ಲೋ|| ಅಗ್ರಮಗ್ರಂತದೀಶಾನ್ಯೇ ಮೂಲಂಮೂಲೇಚನೈರುತೌ |
ಅಗ್ರಂಮೂಲಂಚಸಂಯೋಜ್ಯಮನಿಲಾನಿಲಕೋಣಯೋಃ ||

ಟೀ|| ತೊಲೆಗಳ ತುದಿಯೂ ಈಶಾನ್ಯಕೋಣದಲ್ಲಿ ಸಂಧಿಸಬೇಕು ತುದಿಯೂ ಬುಡವೂ ಆಗ್ನೇಯದಲ್ಲಿಯೂ ವಾಯುವ್ಯದಲ್ಲಿಯೂ ಕೂಡಬೇಕು.

ರಂಧ್ರ್ಯಮೂಲಾ ತದೂರ್ಧ್ವಂಚ ತದಗ್ರಾದ್ಧೋ ಮುಖಂತಥಾ |
ವಾಳಿಕಾ ಪಟಲಂವೃಜ್ಯ ಮಂಡಜಾಂತ್ಯಮುಖಂ ತಥಾ | ಏವಂ
ದೋಷಂವಿನಾಕುರ್ಯ್ಯಾಂನ್ಮಯವಾಸ್ತುಪ್ರಕಾರತಃ ||

ಟೀ|| ತೊಲೆಯ ಮೂಲದಲ್ಲಿಯ ಪಾಳಿಯು ಮೇಲು ಮುಖವಾಗಿಯೂ ತುದಿಯ ವಾಳಿಯು ಕೆಳಗಿನ ಮುಖವಾಗಿಯೂ ಮಾಡಿ ಕೊನೆಯಲ್ಲಿ ಗುಂಡಾಗಿ ಚಂಡಿನಂತೆ ಮಾಡಬೇಕು ಈ ಪ್ರಕಾರ ಮಯವಾಸ್ತುವಿನಲ್ಲಿ ಹೇಳಲ್ಪಡುತ್ತೆ

ಶ್ಲೋ|| ಮೂಲಯುಗ್ಮಾಗ್ರಯುಗ್ಮಂಚಸಂಯೋಜ್ಯಂನಿಂದಿತಾಃಪರೆ | ಯತ್ರಮೂಲಾಗ್ರಸಂಯೋಜ್ಯಶ್ಚತ್ರುಲಕ್ಷ್ಮೀಸ್ಥಿರಾಭವೇತ್ ||

ಟೀ|| ತೊಲೆಯ ಬುಡಗಳೆರಡೂ ಸಂಧಿಸಬೇಕು. ಹಾಗೆಯೇ ತುದಿಗಳೂ ಸಂಧಿಸಬೇಕು ವಿಹಿತಸ್ಥಾನದಲ್ಲಿ ಅಲ್ಲದೆ ಬೇರೆ ಸ್ಥಳದಲ್ಲಿ ಕೂಡಿದರೂ,ಪಾಳಿಗಳು ತುದಿಯ ಪಾಳಿಯನ್ನ ಬುಡಪಾಳಿಯು ಕೆಳಗೆ ಹಾಕಿದರೂ ಶತ್ರುಭಾಗ್ಯವು ಸ್ಥಿರವಾಗುವದು.

ಶ್ಲೋ|| ಅಧೋಮೂಲಂಯಥಾಯುಂಜ್ಯಾದನ್ಯಥಾದೋಷಈರಿತಃ|
ಅಧೋಗ್ರಂವಾಯುಕೋಣೇಚನದೋಷಃಸರ್ವಶೋಭನಂ ||

ಟೀ|| ತೊಲೆಯಬುಡದ ಪಾಳಿಯನ್ನು ಕೆಳಗಡೆ ಹಾಕತಕ್ಕದ್ದು, ಅಗ್ರವ

ನ್ನು ಕೆಳಗೆ ಹಾಕಬೇಕಾದರೆ ವಾಯುವ್ಯಮೂಲೆಯಲ್ಲಿ ಆಗಬಹುದು ಹೀಗೆ ಮಾಡಿದರೆ ದೋಷವಿಲ್ಲ.

ಶ್ಲೋ॥ ಮೂಲೇಮೂಲಂಯಥಾಯುಂ ಜ್ಯಾದ್ಗೃಹೇಚಾಗ್ನಿಭಯಂ ಭವೇತ್ । ಅಗ್ರೇಚಾಗ್ರಂಯಥಾಯುಂಜ್ಯಾತ್ಕರ್ತಾಶೀಘ್ರಂವಿನಶ್ಯತಿ ॥

ಟೀ॥ ವಿಹಿತ ಸ್ಥಾನಗಳಲ್ಲದೆ ಇತರ ಸ್ಥಳಗಳಲ್ಲಿ ಬುಡ ಕೂಡಿಸಿದರೋ ಆ ಮನೆಗೆ ಅಗ್ನಿಯಿಂದ ಭಯವುಂಟಾಗುವದು, ತುದಿಗಳೂ ತುದಿಗಳೂ ಕೂಡಿದರೆ ಯಜಮಾನನು ನಾಶವಾಗುವನು.

ಶ್ಲೋ॥ ತುಲಾಘನಂತಧರ್ಧಂಚ ಪಾಳಿಕಾಪಟನಿರ್ಣಯಃ । ಹೀನಾಧಿಕ್ಯಂಬಲಕ್ಷೀಣಂದಳಂಚಂಚಲಮೇವವಾ । ದಳಂಬಲಾತ್ಪಾಳಿಕು ರ್ಕ್ಯಾಧನಧಾನ್ಯಾದಿಸಂಪದಃ ॥

ಟೀ॥ ತೊಲೆಯ ಗಾತ್ರವೆಷ್ಟು ಇಧೆಯೋ ಆದರಲ್ಲಿ ಅರ್ಧವನ್ನು ಪಾಳಿ ತೆಗಿಯಬೇಕು. ಇವಕ್ಕೆ ಕಡಮೆಯಾಗಲಿ ಅಧಿಕವಾಗಲಿ ಮಾಡಿದರೆ ಧನಕ್ಷಯವಾಗುವದು ಪಾಳಿಯು ಸಡಲವಾಗಿದ್ದರೂ ಸರಿಯಲ್ಲ ಬಿಗುವಾಗಿ ಪಾಳಿ ಇದ್ದರೆ ಧನಧಾನ್ಯಾದಿ ಸಂಪತ್ತುಂಟಾಗುವದು.

ಶ್ಲೋ॥ ತುಳತಾಕರ್ಣರಂಧ್ರಸ್ಯ ತುಲವಿಸ್ತಾರಭಾಗಕಂ ॥ ತ್ರಿಭಾಗಂ ಚಚತುರ್ಭಾಗಂಪಂಚಭಾಗಾಂಶಮಂಬಕಂ॥ತುಳಿತಾಮಾನರಂಧ್ರಂ ಚಶೋಭನಂಗೃಹಕರ್ಮ ಸು ॥

ಟೀ ॥ ತೊಲೆಗಳ ಆದ್ಯಂತಗಳಲ್ಲಿ ಸ್ತಂಭದಲ್ಲಿ ದೂಲಗಳು ಹಿಡಿಯುವ ದಕ್ಕೆ ರಂಧ್ರಗಳನ್ನು ಮಾಡಬೇಕಾದರೆ ಆ ದೂಲದ ಅಗಲವನ್ನು ೩-೪-೫ ಭಾಗಗಳಾಗಿ ಮಾಡಿ ಇವುಗಳಲ್ಲಿ ೧ ಭಾಗವನ್ನು ರಂಧ್ರಮಾಡಬೇಕು ಅಥವಾ ಕೂಲು ಹಿಡಿಯುವಷ್ಟು ಮಾಡಿದರೆ ಉತ್ತಮವಾದದ್ದು.

ಶ್ಲೋ ॥ ತುಲಾಮೂಲಂ ಯೋನಿಕೃತ್ಯಂತುಲಾಗ್ರಂಚವೃಟಿಂತಥಾ ಯೋನಿಕೂಟಮಿತಿಖ್ಯಾತಂ ಸಂಧಿಂಕೃತ್ವಾಶುಭಂಭವೇತ್ ॥

ಟೀ॥ ದೂಲದ ಬುಡವನ್ನು ಯೋನಿಯ ಆಕಾರವಾಗಿಯೂ ತುದಿಯನ್ನು ಚಂಡಿನಹಾಗೂ ಮಾಡಿ ಈ ಯೆರಡು ಕೂಡಿದರೆ ಯೋನಿಕೂಟವೆನ್ನಲ್ಪಡುವದು. ಸಂಧಿಯು ಶುಭಕರವಾದದ್ದು.

ಪಟಭೇದಗಳು.

ಶ್ಲೋ ॥ ದಾರಿದ್ರ್ಯಂದ್ವಿನಟಂಕುರ್ಯಾತ್ಷಟ್ಕಂಧನನಾಶನಂಸಪ್ತಕಂ ರೋಗಕತಂವಿಂದ್ಯಾದಷ್ಟಮುಂಕುಷ್ಠರೋಗಕೃತ್। ದಶಮುಂಬಂಧನಂ

ಕುರ್ಯಾದ್ದ್ವಾದಶಂದೋಷಸಂಗ್ರಹಂ । ಚತುರ್ದಶಗೃಹಂಕ್ರೂರಂಸ್ತ್ರೀ
ನಾಶಂ ಷೋಡಶಂಭವೇತ್ । ಅಷ್ಟಾದಶಂಪುತ್ರನಾಶಂಧಾನ್ಯನಾಶಸ್ತು
ವಿಂಶತಿಃ । ದ್ವಾವಿಂಶತಿಃಶತ್ರುಘಾತಂಚತುರ್ವಿಂಶೋಗ್ನಿದಾಹಕಂ ।
ಷಡ್ವಿಂಶಂಕುಲನಾಶಾಯ ಅಷ್ಟವಿಂಶಮೃಣಂಭವೇತ್॥ತ್ರಿಂಶದ್ರಾ
ಜ್ಯಭಯಂಕುರ್ಯಾದ್ದ್ವಾತ್ರಿಂಶಂಮರಣಂಕ್ರಿಯಾತ್ । ಚತುಸ್ತ್ರಿಂಶ
ದ್ಭಯಂಕುರ್ಯಾತ್ಷಟ್ತ್ರಿಂಶತಿಬಲಕ್ಷಯಂ ॥ ಅಷ್ಟತ್ರಿಂಶಾತ್ಪಾಂಡು
ರೋಗಂತಾಳಿಸಂಖ್ಯಾಮೃತಿಂಕ್ರಿಯಾತ್ ॥ ಯುಗ್ಮಗೇಹ್ಯಂತಥಾವ
ರ್ಜ್ಯನ್ಯಾಗೇಯುವಚನಂತಥಾ ॥

ಟೀ॥ ಅಂಕಣಗಳು ೨ ಆದರೆ ದಾರಿದ್ರ್ಯ, ೪ ಧನನಾಶನ, ೬ ರೋಗ, ೮ ಕುಷ್ಟರೋಗ, ೧೦ ನಿರ್ಬಂಧ, ೧೨ ಪಾಪವೃದ್ಧಿ, ೧೪ ಕ್ರೂರ, ೧೬ ಸ್ತ್ರೀ ನಾಶ, ೧೮ ಪುತ್ರನಹಾನಿ, ೨೦ ಧಾನ್ಯಕ್ಷಯ, ೨೨ ಪತಿನಾಶ, ೨೪ ಅಗ್ನಿದಾಹ, ೨೬ ಕುಲನಾಶ, ೨೮, ಸಾಲ, ೩೦ ರಾಜಭಯ, ೩೨,ಮರಣ ೩೪, ಭಯ, ೩೬. ಬಲಹೀನ, ೩೮ ಪಾಂಡುರೋಗ, ೪೦ ಮರಣ ಇವುಗಳನ್ನುಂಟುಮಾಡುವದು. ಮುಖ್ಯವಾದಿ ಸಂಖ್ಯೆಯುಳ್ಳ ಅಂಕಣಗಳ ನ್ನುಮಾಡಬಾರದು.

ಶ್ಲೋ ॥ ಖಂಡಸಂಜ್ಞಾಃ ಪಟಾದೀನಾಂಮೂಲಾಗ್ರೇಪಾರ್ಶ್ವಯೋಸ್ತ
ಥಾ । ತತ್ಪಾರ್ಶ್ವಪಟಮರ್ಧಂಸ್ಯಾತ್ಪ್ರತಿಗೇಹಸಮಾಶ್ರಿತಂ । ವಿಷ
ಮಂಪಟನಾಮಸ್ಯಾತ್ಪುತ್ರನಾಶಸ್ತುಜಾಯತೇ ॥

ಟೀ॥ ವಿಸ್ತಾರವಾದ ಅಂಕಣಗಳ ಸಂಜ್ಞೆಯ ಮೂಲದಲ್ಲಾಗಲಿ ತುದಿಯ ಲ್ಲಾಗಲಿ, ಮಧ್ಯದಲ್ಲಾಗಲಿ ಅರ್ಧ ಅಂಕಣವು ಎರಡನೇ ಮನೆಗೆ ಶೇರಿದ್ದಾ ದರೆ ಅದರ ಹೆಸರು ವಿಷಮಪಂಚವೆನಿಸಲ್ಪಡುವದು, ಅಂಥಾ ಮನೆಯಲ್ಲಿ ವಾಸಮಾಡಿದರೆ ಸಂತಾನಹೀನವಾಗುವದು.

ಶ್ಲೋ॥ಹಸ್ತಸ್ತಂಭತುಲಾದಿಕಾನರಗೃಹೆಯುಂಜೀತಯುಗ್ಮಂಯಥಾ।
ಯುಗ್ಮಾಯುಗ್ಮಕ ಸಂಖ್ಯಯಾ ಸುರಗೃಹೇ ಯುಂಜೀತ ಹಸ್ತಾದಿ
ಕಾನ । ಮಧ್ಯದ್ವಾರಮನಿಂದಿತಂ ಸುರಮಹೀದೇವಕ್ಷಿತೀಶಾಲಯೇ
ಶೇಷಾಣಾ ಮುಪಮಧ್ಯಮೇವವಿಹಿತಂ ತತ್ಸಂಪದಾಮಾಸ್ಪದಂ ॥

ಟೀ॥ ಮನೆಗಳಿಗೆ ವಾಸಗಳು ಸ್ತಂಭಗಳು ದೂಲಗಳು ಮೊದಲಾದವೆಲ್ಲವೂ ಗೋಡೆಯಲ್ಲಿರುವದಲ್ಲದೆ ಕಾಣತಕ್ಕವೆಲ್ಲವೂ ಮನುಷ್ಯರ ವಾಸಕ್ಕೆ ಯೋ ಗ್ಯವಾದ ಮನೆಗಳಲ್ಲಿ ಸಮಸಂಖ್ಯೆಯಾಗಲಿ ಹಾಕಬೇಕು. ದೇವಸ್ಥಾನಗೆ

ಳಿಗೆ ಸಮಸಂಖ್ಯೆಯಾಗಲಿ ವಿಷಮಸಂಖ್ಯೆಯಾಗಲಿ ಆಗಬಹುದು, ದೇವಸ್ಥಾನಗಳಿಗೂ ಬ್ರಾಹ್ಮಣರ ಮನೆಗೂ ಅರಮನೆಗೂ ಮಧ್ಯದಲ್ಲಿ ದ್ವಾರವಿಡುವದು ಶುಭವು, ಮಿಕ್ಕಾದವರಿಗೆಲ್ಲಾ ಉಪಮಧ್ಯದಲ್ಲಿ ದ್ವಾರವಂ ಮಾಡಬೇಕು. ಹೀಗೆ ಮಾಡಿದರೆ ಸಂಪತ್ಕರವಾಗಿರುವದು. ಉಪಮಧ್ಯಮವಂದರೆ,—ಮಧ್ಯೆಯಿರುವ ದೂಲದಕಡೆ ಮಧ್ಯದ ಹೆಸರು.

## ಗೃ ಹ ಕಂ ಠಾ ಭ ರ ಣ.

ಶ್ಲೋ॥ ಗೃಹಾಂತರ್ಮುಖಮಧ್ಯೇತು ರಂಜುಮೂಲಾಗ್ರಯೋಃಕ್ರಿಯತ್ । ಸೂತ್ರದ್ವಯತಮುಚ್ಛ್ರೀದಂದ್ವಾದಶಾಂಗುಲಲಂಬಕಂ॥ವೇಣುನಾಕಂರದಂಡಂಚಕಂಠಾಭರಣಮೀರಿತಂ । ವಿಪ್ರಮಾನಂಚತುಹಸ್ತಂಕ್ಷತ್ರಿಯಾಣಾಂತ್ರಿಹಸ್ತಕಂ । ವೈಶ್ಯಶೂದ್ರೈರ್ದ್ವಿಹಸ್ತಾರ್ಧಮಿತೀತತ್ಕಂರದಂಡಕಂ॥ಕಂರದಂಡಂವಿನಾಗೇಹಂಪಂಚದೋಷಯುತಂಭವೇತ್ ॥ ಅಗ್ನಿದಾಹಶ್ಚರೋಗಶ್ಚ ಗೃಹಪೀಡಾ ದರಿದ್ರತಾ ॥

ಟೀ॥ ಮನೆಗಳ ಹೊಳಬಾಗಿಲ ಮಧ್ಯದಲ್ಲಿ ದೂಲಗಳ ಕೊನೆಗಳಲ್ಲಾಗಲೀ ಬುಡಗಳಲ್ಲಾಗಲಿ ೧೨ ಅಂಗುಲ ಉದ್ದವುಳ್ಳ ಎರಡು ಸೂತ್ರಗಳನ್ನ ಕಟ್ಟಿ ಅದಕ್ಕೆ ಬ್ರಾಹ್ಮಣರಾದರೆ ೪ ಹಸ್ತ ಪ್ರಮಾಣದ ಬಿದುರು ವಾಸವನ್ನು ಕ್ಷತ್ರಿಯರಾದರೆ ೩ ಹಸ್ತಗಳೂ ವೈಶ್ಯ ಶೂದ್ರರಾದರೆ ೨॥ ಹಸ್ತ ಪ್ರಮಾಣವುಳ್ಳ ದಂಡವನ್ನು ಕಟ್ಟಬೇಕು. ಹೀಗೆ ದಂಡವನ್ನು ಕಟ್ಟದೆ ಇದ್ದರೆ ಆ ಮನೆಯು ಅಗ್ನಿದಾಹವು ರೋಗವೂ, ಗೃಹವೇಧೆಯು ದುಃಖವು ದರಿದ್ರವು ಎಂಬ ಅಯಿದು ದೋಷಗಳಿಂದಾ ಕೂಡಿದ್ದಾಗುವದು.

## ಭಾವಿಯನ್ನ ತೆಗೆಯುವದಕ್ಕೆ

ಶ್ಲೋ॥ ಆಗ್ನೇಯಾದಿ ತ್ರಿಕೋಣೇಷು ನಕುರ್ಯಾತ್ಕೂಪಕಂಬುಧಃ ।
ಶೇಷಸ್ಥಾನೇಷು ಶುಭದಂ ಗ್ರಾಮಾದೀನಾ ಮಿದಂಸ್ಮೃತಂ ॥

ಟೀ॥ ಬಾವಿಗಳನ್ನು ತೆಗಿಸಬೇಕಾದರೆ, ಮನೆಗೆ ಆಗ್ನೇಯ, ನೈರುತ್ಯ, ವಾಯುವ್ಯ ಈ ಸ್ಥಳಗಳನ್ನು ಬಿಟ್ಟು ಉಳಿದ ಸ್ಥಾನಗಳಗಲ್ಲಿ ತೆಗಿಸಬೇಕು.

ಶ್ಲೋ॥ ಪುಷ್ಟಿಂಭೂತಿಂಪುತ್ರಹಾನಿಂಪುರಂಧ್ರೀನಾಶಮೃತ್ಯುಸಂಪದಂ ಶಸ್ತ್ರಬಾಧಾಂ । ಕಿಂಚಿತ್ಸೌಖ್ಯಂಶಂಭುಕೋಣಾದಿಕುರ್ಯಾತ್ಕೂಪಸ್ಥಾನಂಸದ್ಮಮಧ್ಯೇರ್ಥಹಾನಿಂ ॥ ....

ಟೀ॥ ಭಾವಿಯನ್ನು ಈಶಾನ್ಯ ಮೂಲೆಯಲ್ಲಿ ತೆಗೆದರೆ ಪುಷ್ಟಿಯನ್ನುಂಟುಮಾಡುವದು ಪೂರ್ವದಿಕ್ಕಿನಲ್ಲಿ ಸಂಪತ್ತು ಆಗ್ನೇಯದಲ್ಲಿ ಸಂತಾನನಾಶ

ದಕ್ಷಿಣದಲ್ಲಿ ಭಾರ್ಯಾಹಾನಿ ನೈಋತ್ಯದಲ್ಲಿ ಮರಣ, ಪಶ್ಚಿಮದಲ್ಲಿ ಸಂಪತ್ತು ವಾಯುವ್ಯದಲ್ಲಿ ಶಸ್ತ್ರಬಾಧೆ, ಉತ್ತರದಲ್ಲಿ ಸ್ವಲ್ಪ ಸೌಖ್ಯ, ಈ ಪ್ರಕಾರ ಫಲವನ್ನು ಕೊಡುವದು, ಮತ್ತು "ವರಾಹಮಿಹಿರಾಚಾರ್ಯರು ಹೇಳುವದೇ ನಂದರೆ, ಶ್ಲೋ॥ ಆಗ್ನೇಯೇಯದಿಕೋಣೇ ಗ್ರಾಮಸ್ಯ ಗೃಹಸ್ಯವಾಭವತಿ ಕೋಪಃ। ನಿತ್ಯಂಕರೋತಿದಾಹಂಜಲಮಪಿತತ್ರೈವಚಂಚಲಪ್ರಾಯಂ।ನೈಋ ತಿಕೋಣೇ ಬಾಲಕ್ಷಯಂಚವನಿತಾಕ್ಷಯಂವಾಯವ್ಯೇ। ದಿಕ್ತ್ರಯಮೇತತ್ತ್ಯಕ್ತ್ವಾಶೇಷಾಸ್ತುಶುಭಾವಹಾಃಪ್ರೋಕ್ತಾಃ ॥

ತಾ॥ ಆಗ್ನೇಯದಲ್ಲಿ ದಾಹವನ್ನುಂಟುಮಾಡುವದಲ್ಲದೆ ನೀರು ಸ್ಥಿರ ವಾಗಿರುವದಿಲ್ಲ ನೈರೃತ್ಯದಲ್ಲಿ ಬಾಲನಾಶವು,ವಾಯುವ್ಯದಲ್ಲಿ ಸ್ತ್ರೀನಾಶ ನವು ಉಳಿದ ದಿಕ್ಕುಗಳಲ್ಲಿ ಶ್ರೇಷ್ಠವು. ಕಾಲಾಮೃತದಲ್ಲಿ (ಸೌಮ್ಯಪ್ರಾಗ್ಜಲಗದೀಶಕೂಪಖನನಂಕರ್ತುಶ್ಚ ಲಕ್ಷ್ಮೀಪ್ರದಂ) ಎಂದು ಹೇಳಿರುವದ್ದರಿಂದಾ ಉತ್ತರ, ಪೂರ್ವ, ಪಶ್ಚಿಮಗಳನ್ನೇ, ಅಂಗೀಕರಿಸಿದ ಹಾಗಾಯಿತು,ಇಲ್ಲನ್ನು—ಶ್ಲೋ॥ ಪ್ರಾಚ್ಯಾದಿದಿಕ್ಸ್ಥೇಸಲಿಲೇಸುತಹಾನಿಶ್ಶಿಖಿಭಯಂರಿಪುಭಯಂಚ। ಸ್ತ್ರೀಕಲಹಂಸ್ತ್ರೀದೌಷ್ಟ್ಯಂನೈಷ್ಟ್ಯಂಚಿಂತಾತ್ಮಜವಿವೃದ್ಧಿಃ। ಯೆಂದು ಹೇಳಿರುವದ್ದರಿಂದಾ ಪೂರ್ವಾದಿ ೭ ಧಿಕ್ಕುಗಳಲ್ಲೂ ದೋಷವನ್ನು ಹೇಳಿ ಈಶಾನ್ಯವನ್ನೇ ಅಂಗೀಕರಿಸಿದಂತಾಯಿತು ಇದೇ ಅರ್ಥವನ್ನೇ ಹಿಡಿದು ಮುಹೂರ್ತಮಾರ್ತಾಂಡದಲ್ಲಿ,- (ಜಲಮೀಶಿತುರ್ದಿಶಿವರಂ) ವಾಯೋರವಾಚ್ಯಾತ್ರಕಂ ಅಲ್ಪೇಶಕ್ತಿ ಭುವೋರ್ಯಥಾ ರುಚಿವರೇಗೇಹಸ್ಯದಕ್ಷೇಟ್ವಾಂಬೂಲೂಖಲಚುಲ್ಲಿತಾ ಪಿತೃಪದಪ್ರಕ್ಷಾಳನಾನ್ಯೂಚಿರೆ ॥ ಯೆಂದು ಹೇಳಿರುವದ್ದರಿಂದಾ . ಈಶಾನ್ಯದಲ್ಲಿಯೇ ಜಲಸ್ಥಾನವನ್ನು ಮಾಡಬೇಕು. ವಾಯವ್ಯ ಮೂಲೆಯಲ್ಲಿ ಮೂತ್ರಸ್ಥಾನವನ್ನು ಮಾಡಬೇಕು. ದಕ್ಷಿಣ ದಿಕ್ಕಿನಲ್ಲಿ ಬೀಸುವ ಕಲ್ಲು ಮರಳು ಒಲೆ ಇವುಗಳನ್ನು ಮಾಡಬೇಕು. ಭೂಮಿ ಸಾಲದೆ ಹೋದರೂ ಶಕ್ತಿ ಇಲ್ಲದೆ ಇದ್ದರೂ ತನ್ನ ಮನಸ್ಸಿಗೆ ಹಿತವಾದ ಸ್ಥಳದಲ್ಲಿ ಮಾಡಬಹುದು ಗ್ರಂಥಾಂತರದಲ್ಲಿ,= ಶ್ಲೋ॥ ಉಲೂಖಲಂಷಷ್ಟ್ಯಯಂತ್ರಮಗ್ನಿಸ್ಥಾನಂಜಲಾಶ್ರಯಂ । ವೇಶ್ಮನೋದಕ್ಷಿಣೆ ಪಾರ್ಶ್ವೆ ಪಿತ್ರೂಣಾಂಪಾದಶೌಚನಂ ॥

ಗೃಹಕರ್ಣಿಕಾಚಕ್ರ.

ಶ್ಲೋ॥ ವಿಧುರೇಖಾ ತ್ರಯೋತಸ್ಮಿನ್ ದೀರ್ಘ್ವ ರೇಖಾಚತುಷ್ಟಯಂ । ಅಶ್ವಿನ್ಯಾದೀ ನಿ[illegible]ಕ್ಷಾಣಿ ವಾಮಂವಾರ್ಶ್ವಾದಿ ವಿನ್ಯಸೇತ್ ॥

ಟೀ॥ ಅರ್ಧಚಂದ್ರನಹಾಗೆ ಮೂರುಲಿಂಗಗಳನ್ನು ಬರೆದು ಅವುಗಳಿಗೆ ಅಡ್ಡವಾಗಿ ನಾಲ್ಕು ರೇಖೆಗಳನ್ನು ಬರೆದು ಆ ಚಕ್ರದ ಯೆಡಪಕ್ಕದಲ್ಲಿ



ಪ್ರಾರಂಭಿಸಿ ಅಶ್ವಿನ್ಯಾದಿ ನಕ್ಷತ್ರಗಳನ್ನು ಕ್ರಮವಾಗಿ ಪ್ರದಕ್ಷಿಣವಾಗಿ ಬರೆಯಬೇಕು.

## ಗೃ ಹ ಕ ರ್ಣಿ ಕಾ ಚ ಕ್ರ,

ಈ ಪ್ರಕಾರ ಬರೆದ ಚಕ್ರದಲ್ಲಿ ಗೃಹಕರ್ತನ ನಕ್ಷತ್ರವು ಯಾವರೇಖೆಯಲ್ಲಿರುವದೋ ಆ ನಕ್ಷತ್ರಕ್ಕೆ ನವಗ್ರಹ ದೋಷಗಳಿಲ್ಲದೆ ಇದ್ದರೆ ಶುಭವಾಗಿರುವದು.

ಶ್ಲೋ|| ರೇಖಾಯಾಕ್ಷ್ಣೆ ಸ್ಥಿತೆಭಾನೌ ಭಯಂರಾಜ್ಞೋ ವಿನಿರ್ದಿಶೇತ್, |
ಕುಜೆಸ್ಥಿತೆರ್ವಹ್ನಿಭಯಂಪುತ್ರನಾಶೋಬುಧೇಸ್ಥಿತೆ| ಜೀವೇಸ್ಥಿತೆಮ
ಹಾಭೀತಿರ್ನಷ್ಟತ್ಸು ಕ್ರೇಸ್ಥಿತೇಯದಿ | ಶನ್ಯೈಶ್ಚರೇಸ್ಥಿತೇನಿತ್ಯಧನಹಾನಿ
ಸ್ತಥೈವಚ|ರೋಗಪೀಡಾಭಯಂರಾಹುಕೇತಾವ್ವಾಸಂಸ್ಥಿತಾಯದಿ ||

ಟೀ|| ಸೂರ್ಯನಿದ್ದರೆ ರಾಜಭೀತಿಯು ಅಂಗಾರಕನಿದ್ದರೆ ಅಗ್ನಿಭಯವೂ ಬುಧನಿದ್ದರೆ ಪುತ್ರನಾಶನವು, ಗುರುವಿದ್ದರೆ ಬಹಳ ಭಯವು ಶುಕ್ರನಿದ್ದರೆ ನಷ್ಟ ಶನಿಯಿದ್ದರೆ ಯಾವಾಗ್ಯೂ ಧನಹಾನಿ, ರಾಹು, ಕೇತುಗಳಿದ್ದರೆ ರೋಗದುಃಖ ಭಯವು ಉಂಟಾಗುವದು.

ಶ್ಲೋ|| ಊರ್ಧ್ವರ್ಕ್ಷಂಶುಭದಂಪ್ರೋಕ್ತಮಧೋಕ್ಷಂತುನಿಂದಿತಂ |
ಗೃಹೇತುಚಕ್ರದ್ರೇಖಾಯಾಂವಿಜ್ಞೇಯಾಗೃಹಕರ್ಣಿಕಾ ||

ಟೀ|| ಊರ್ಧ್ವದಲ್ಲಿರುವ ನಕ್ಷತ್ರಗಳು ಶುಭಕರಗಳು, ಕೆಳಗೆ ಇರುವ ನಕ್ಷತ್ರಗಳು ನಿಂದ್ಯಗಳು ಈ ಪ್ರಕಾರ ಗೃಹಕರ್ಣಿಕಾ ಚಕ್ರದ ಫಲವಂ ತಿಳಿ

ಯತಕ್ಕದ್ದು. ಹೀಗೆಯೇ ಕಾಲಾಮೃತದಲ್ಲಿ- ಶ್ಲೋ॥ ಚಕ್ರಂಸ್ಯಾದ್ಗೃಹ ಕರ್ಣಿಕಾಹ್ವಯಮಿದಂ ಸಂಲಿಖ್ಯ ಲಿಂಗತ್ರಯಂ । ರೇಖಾಸ್ತತ್ರಚತ್ರಸಪವ ವಿಲಿಖೇತ್ತಿರ್ಯಕ್ಷ್ವದಸ್ರಾದಿತಃ ॥ ಏಕೈಕಸ್ಸಹಿತಾರಕಾನವನಪಸ್ರಾಗ್ಲಿಂಗವಾ ಮಾಧರಾದೂರ್ಧ್ವಸ್ಥಾಪಿಚೋರ್ಧ್ವಗಾಶ್ಚಭಫಲಾನೀದ್ಯಾಸ್ತ್ವಥೋದ್ರೇ ಖಗಾಃ॥ ತಾ॥ ಶಿರಸ್ಸಿನಲ್ಲಿರುವ ನಕ್ಷತ್ರಗಳೂ ಎಡಗಡೆಯ ೪ ನಕ್ಷತ್ರಗಳೂ ಸ್ತಂಭಪ್ರತಿಷ್ಠೆ ಮೊದಲಾದ್ದರಲ್ಲಿ ಶ್ರೇಷ್ಠಗಳು॥ಶ್ಲೋ॥ ರೇಖಾಯಾಂಸ್ಥಿತಿರ ಕ್ಷತತ್ರಗೃಹಿಣಃಸ್ತಂಭಪ್ರತಿಷ್ಠಾಗಮೆ ಸೂರ್ಯೇಣಾಗ್ನಿಭಯಂಕುಜೇನಸಹಿತೊ ಮೃತ್ಯುಂಬುಧೇನಾಮಯಂ। ದೌರ್ಭಾಗ್ಯಂಗುರುಣಾಸಿತೇನಕಲಹಂಮಂದೇ ನಚೋರಾಗಮೊದಾರಿದ್ರ್ಯಂತಮಸಾಧ್ವಜೇನಚಲನಂಕುರ್ಯಾಚ್ಛಶೀತದ್ಗೃಹೇ।

ತಾ॥ ಗೃಹಕರ್ಣಿಕಾಚಕ್ರದಲ್ಲಿ ಒಂದು ತಿರ್ಯಗ್ರೇಖೆಯನ್ನು ಹೊಂದಿದ ಗ್ರಹಯುಕ್ತ ಚಂದ್ರಫಲವನ್ನು ಹೇಳುತ್ತಾನೆ, ಸ್ತಂಭಪ್ರತಿಷ್ಠಾಕಾಲದಲ್ಲಿ ಅಡ್ಡರೇಖೆಯಲ್ಲಿ ಚಂದ್ರನು ಸೂರ್ಯನೊಡನೆ ಸೇರಿದ್ದರೆ ಅಗ್ನಿಭಯ, ಅಂಗಾರ ಕನೊಡನೆ ಸೇರಿದ್ದರೆ ಮರಣ, ಬುಧನೊಡನೆ ಸೇರಿದ್ದರೆ ರೋಗಭಯ, ಗುರು ವಿನೊಡನೆ ಸೇರಿದ್ದರೆ ದೌರ್ಭಾಗ್ಯ, ಶುಕ್ರನೊಡನೆ ಸೇರಿದ್ದರೆ ಕಲಹ, ಶನಿ ಯಿಂಡನೆ ಸೇರಿದ್ದರೆ ಚೋರಾಗಮ, ರಾಹುವಿನೊಡನೆ ಸೇರಿದ್ದರೆ ದಾರಿದ್ರ್ಯ, ಕೇತುವಿನೊಡನೆ ಸೇರಿದ್ದರೆ ಸ್ಥಾನಚಲನವೆಂದುನ್ನು ಗ್ರಹಗಳೊಡನೆ ಸೇರದೆ ಇದ್ದರೆ ಶುಭಕರವೆಂದೂನ್ನು ತಿಳಿಯುತಕ್ಕದ್ದು.

## ಗೃಹಪ್ರವೇಶ ವಿಷಯ.

ಶ್ಲೋ॥ ಅಕವಾಟಮನಾಚ್ಛನ್ನಮದತ್ತಬಲಿ ಭೋಜನಂ । ಗೃಹಂನ ಪ್ರವಿಶೇದೇವವಿಪದಾಮಾಕರಂಹಿತತ್ ॥

ಟೀ॥ ಗೃಹಪ್ರವೇಶಮಾಡುವಾಗ ಕದವನ್ನು ಇಡದೆಮೇಲೆ ಹೊದ್ದಿಕೆಯನ್ನು ಹಾಕದೆ ವಾಸ್ತುಬಲಿ ಮುಂತಾದ್ದು ಇಲ್ಲದೆ ಗೃಹಪ್ರವೇಶ ಮಾಡಬಾರದು. ~~ಮುಂತಾದ್ದು ಇಲ್ಲದೆ ಗೃಹಪ್ರವೇಶ ಮಾಡಬಾರದು.~~

ಹಾಗೆ ಮಾಡಿದ್ದಾದರೆ ಸಮಸ್ತ ದುಃಖಗಳೂ ಉಂಟಾಗುವದು.

## ವೃಷಭಚಕ್ರ.

ಶ್ಲೋ ॥ ಯಸ್ಮಿನ್ ಭೇರ್ಕಯುತ ಸ್ತದಾದಿಗಣಯೇ ಚ್ಚಕ್ರಾಸ್ಸಿತ ಕ್ಷಾರ್ಣತತಃ ಕುರ್ಯಾನ್ಮೃತ್ಯು ಮುಡುತ್ರಯಂ ಶಿರಸಿಚ ಪ್ರಾ ಕ್ಪಾದಯೋ ರ್ದುರ್ದಶಾಂ । ಚತ್ವಾರ್ಯೇವತು ಪಶ್ಚಿಮಾಂಘ್ರಿ

ಯುಗೆಳಸ್ಥೈರ್ಯಂಚಚತ್ವಾರಿತತ್ಪುಚ್ಛೇತುಭ್ರಮಣಂತ್ರಯಂಚ|ತುರ
ಗೋವಾಮೆತುಪಾರ್ಶ್ವೇರ್ಥಕೃತ್ ||

ಟೀ|| ಧಾನ್ಯಂದಕ್ಷಿಣ ಪಾರ್ಶ್ವಕೆ ಚತುರದೋ ಪೃಷ್ಠೇತ್ರಯಂಸಂಪದಂ
ವಕ್ತ್ರೇ... ಯಂಪಶೂನ್ ಪ್ರಕುರುತೇಚಕ್ರಂವೃಷಾಖ್ಯಂತ್ವಿದಂದ್ವಂದ್ವಾ
ಷ್ವೇಗ್ನಿ ಭಯಾದಿಕೇಚನೃಪತೇರ್ಯಾತ್ರಾನಿವೃತ್ತೌ ಪುನಸ್ಸಂವೇಶೇಚವಿಧಿ
...ನಿರ್ಮಿತಗೃಹೇಸರ್ವಂವಿಚಿಂತ್ಯಂಬುಧೈಃ|| ಟೀ|| ವೃಷಭಾಕಾರವಾದ ಚಕ್ರ
...ನ್ನು ಬರೆದು, ಅದರ ಶಿರಸ್ಸು ಮೊದಲಾದ ಅಂಗಗಳಲ್ಲಿ ಮುಂದೆ ಹೇಳುವ
...ರಿಗೆ ಸೂರ್ಯನಿರುವ ನಕ್ಷತ್ರ ಮೊದಲುಗೊಂಡು ಬರೆದು, ಅದು ಮೊದ
...ತ್ಯನಕ್ಷತ್ರದವರಿವಿಗೂ ಗಣನೆ ಮಾಡಲು, ನಕ್ಷತ್ರವು ಚಕ್ರಾಕೃತಿ...
ವೃಷಭದ ಶಿರಸ್ಸಿನಲ್ಲಿ ೩ ನಕ್ಷತ್ರಗಳಿದ್ದರೆ ಮೃತ್ಯುವೂ, ಮುಂಗಾ...
...ುವ ೪ ನಕ್ಷತ್ರಗಳಾದರೆ ದುರವಸ್ಥೆ, ಹಿಂಗಾಲುಗಳಲ್ಲಿರು...
...ದ್ದರೆ ಚಿರಕಾಲ ವಿರುವಿಕೆಯೂ, ಬಾಲದಲ್ಲಿರುವ ೩...
ಭ್ರಮಣವೂ, ಎಡಗಡೆ ಇರುವ ೪ ನಕ್ಷತ್ರಗಳಲ್ಲಿ ...
ಇರುವ ೪ ನಕ್ಷತ್ರಗಳಲ್ಲಿದ್ದರೆ ಧಾನ್ಯವನ್ನೂ, ಪೃಷ್ಠಭಾ...
ತ್ರಗಳಲ್ಲಿದ್ದರೆ ಸಂಪತ್ತನ್ನೂ, ಮುಖದಲ್ಲಿರುವ ೩ ನಕ್ಷತ್ರಗಳಲ್ಲಿದ್ದರ ಪ
ಶುಗಳನ್ನೂ ಉಂಟಾಗಿಸುವವು,ಇದು ವೃಷಭಚಕ್ರವು ಈ ಚಕ್ರವು ದ್ವಂದ್ವ
ಯುದ್ಧಮಾಡುವಾಗಲೂ ರಾಜರು ಯಾತ್ರೆ ಹೊರಡುವಾಗಲೂ ಪುನಃ ಬ
ರುವಾಗಲೂ ಗೃಹಪ್ರವೇಶ ಕಾಲದಲ್ಲಿಯೂ ಇತ್ಯಾದಿ ಕಾರ್ಯಗಳಲ್ಲಿ ನೋ
ಡತಕ್ಕದ್ದು.

ಕಲಶೀಚಕ್ರ ಲಕ್ಷಣ.

ಶ್ಲೋ || ಚಕ್ರಂಸ್ಯಾತ್ಕಲಶಸ್ವರೂಪಮುಕ್ತಂಲಿಖ್ಯಮೂರ್ಧ್ನ್ಯೇಕಭಂ
ಪ್ರಾಗಾದ್ಯಾಸುಚತುಷ್ಕತುಃಪ್ರತಿದಿಶಂಚತ್ವಾರಿತನ್ಮಧ್ಯಮೇ| ಕಂ
ಠೇ ತ್ರೀಣಿಗುದೇತ್ರಯಂಚವಿಲಿಖೇದ್ಭಾನಾಂಕ್ರಮಾತ್ತತ್ಫಲಂವಕ್ಷ್ಯೇ
ಕಾರ್ಕಾನ್ವಿತಭಾದಿತಶ್ಚಗಣಯೇತ್ಸಂವೇಶಧಿಷ್ಣ್ಯಂತತಃ|| ಶೀರ್ಷಚ್ಛೇ
ದಮಥಪ್ರವಾಸಮುಭಯಂ ಧಾನ್ಯಂತತೋನಿರ್ಧನಂಗರ್ಭಸ್ರಾವಮ
ಥಶ್ರಿಯಂಗೃಹಕೃತೇರ್ದದ್ಯಾಚ್ಚಿತಾಯುಸ್ಸದಾ| ಸಂಗ್ರಾಮಾಖಿಲ
ದುರ್ಗಶೈಲನಗರಪ್ರಾಸಾದದೇವಾಲಯ ಕ್ಷೇತ್ರಾರಾಮಗೃಹಪ್ರವೇಶ
ಸಮಯೇಜ್ಞೇಯಂಹಿಚಕ್ರದ್ವಯಂ ||

ಟೀ|| ಕಲಶಾಕೃತಿಯಾದ ಚಕ್ರವನ್ನು ಲಿಖಿಸಿ ಅದರೊಳ್ಳೇ ಕೆಳಗೆ ಹೇಳುವ ಮೇರೆಗೆ ಸೂರ್ಯಸಿರುವ ನಕ್ಷತ್ರವಂ ಪ್ರಾರಂಭಿಸಿ ಗೃಹಪ್ರವೇಶ ನಕ್ಷತ್ರದವರಿಗೂ ಯೆಣಿಸಬೇಕು. ಈನಂತರ ಕಲಶದ ಶಿರಸ್ಸಿನಲ್ಲಿ ೧ ನಕ್ಷತ್ರವೂ ... ೧ ನಾಲ್ಕು ನಾಲ್ಕು ನಕ್ಷತ್ರಗಳೂ ಕಂಠದಲ್ಲಿ ಮೂರು ಗುದಸ್ಥಾನ... ಮೂರು ಈ ಪ್ರಕಾರ ಅಭಿಜಿನ್ನಕ್ಷತ್ರವನ್ನು ಬಿಟ್ಟು ಬರೆಯಬೇಕು ಈ ನಕ್ಷತ್ರಗಳಿಗೆ ಕ್ರಮವಾಗಿ ಫಲವೇನಂದರೆ—ಕಲಶದ ಶಿರಸ್ಸಿನಲ್ಲಿರುವ ನಕ್ಷತ್ರದಲ್ಲಿ ಗೃಹಪ್ರವೇಶವಂ ಮಾಡಿದರೆ ಗೃಹಪತಿಗೆ ಶಿರಚ್ಛೇದನವಾಗುವದು. ಪೂರ್ವದಿಕ್ಕಿನಲ್ಲಿರುವ ನಾಲ್ಕು ನಕ್ಷತ್ರಗಳು ದೇಶಾಂತರಗಮನವನ್ನೂ ದಕ್ಷಿಣ ಭಾಗದಲ್ಲಿ ...ನಾಲ್ಕು ನಕ್ಷತ್ರಗಳು ಅಭಯವನ್ನೂ, ಪಶ್ಚಿಮ ಭಾಗದ ನಾಲ್ಕು ನಕ್ಷ...ಸ್ಥವನ್ನು ಉತ್ತರದಕಡೆ ನಾಲ್ಕು ನಕ್ಷತ್ರಗಳು ದಾರಿದ್ರ್ಯವನ್ನೂ, ...ನಾಲ್ಕು ನಕ್ಷತ್ರಗಳು ಯಜಮಾನನಭಾರ್ಯೆಗೆ ಗರ್ಭಸ್ರಾವ ...ಮೂರು ನಕ್ಷತ್ರಗಳು ಸಂಪತಂನ್ನು ಕೆಳಗೆ ಇರತಕ್ಕ ...ರು ವರುಷಗಳಾಯ...ಸ್ಸನ್ನು ಕೊಡುವಂಥಾದ್ದಾ... ಹೇಳಲ್ಪಟ್ಟ ವೃಷಭಚಕ್ರ, ಕಲಶಚಕ್ರಗಳೆರಡು, ಯುದ್ಧ, ದುರ್ಗ, ಪರ್ವತ, ಪಟ್ಟಣ, ಹುಹಡಿ, ದೇವಾಲಯ, ಕೃಷಿಭೂಮಿ, ಉದ್ಯಾನವನ, ನೂತನಗೃಹ ಇವುಗಳ ಪ್ರವೇಶ ಕಾಲದಲ್ಲಿ ನೋಡತಕ್ಕದ್ದು

ಶ್ಲೋ|| ಅವಿಶ್ವೈವಾನ್ವೆಯಾಂಬೋಧಿ ರಾಕಾಶೀತಲದೀಧಿತೇಃ । ಸುಬ್ರಹ್ಮಣ್ಯಾಭಿಧಾನಸ್ಯದ್ವಿತೀಯೇನಾತ್ಮಜನ್ಮನಾ। ಏಕೀಕೃತ್ಯಧಿಯಾ ಸಮ್ಯಗರ್ಥಾನ್ ಗ್ರಂಥಾಂತರಸ್ಥಿತಾನ್। ದರ್ಪಣಸ್ಯಕೃತಾಟೀಕಾಲೋಕನಾಥೇನಯತ್ನತಃ ॥ ಪ್ರಜ್ಞಾಲೋಪಾತ್ಪ್ರಮಾದಾದ್ವಾಪ್ರಾಯಶೀವಾಪ್ರಕೃತೋಕ್ತಯಃ । ಸಂತಃ ಕ್ಷಮಂತುಮಾತಿದ್ಜ್ಞಾಸ್ಸಂತಸ್ಸಂತೋಷದಂತುರಾಃ ॥

ಇತಿ ಶ್ರೀ ಗೃಹವಾಸ್ತು ದರ್ಪಣ ಟೀಕಾ ಸಮಾಪ್ತಾ.

ಶ್ರೀ ಪರಮೇಶ್ವರಾರ್ಪಣಮಸ್ತು.

